Photo by C. P. Patel



ಬಹುಮಾನ
ಪಡೆದ ಶೀರ್ಷಿಕೆ

ಹುಡುಕಲಿಕ್ಕೆ

ಕಳಿಸಿದವರು:
ಎಂ. ಎಸ್. ಕೋಟಿ, ಕುಮಟಾ

ಶೀಘ್ರದಲ್ಲಿಯೇ ಪ್ರದರ್ಶನವನ್ನು ನಿರೀಕ್ಷಿಸಿ!



ಎ. ವಿ. ಯಂ. ರವರ

# ಪೆಣ್

(ತಮಿಳು)

ಅಭಿನಯ:

ಅಂಜಲಿದೇವಿ, ವೈಜಯಂತಿಮಾಲ, ನಾಗಯ್ಯ, ಬಾಲಚಂದರ್, ಆರ್. ಗಣೇಶ್, ಟಿ ಎಸ್. ಬಾಲಯ್ಯ, ಕೆ. ಆರ್. ರಾಮಸ್ವಾಮಿ.

ನಿರ್ದೇಶನ: ಎಂ. ವಿ. ರಾಮನ್ ★ ಸ್ಟುಡಿಯೋ: ಎ. ವಿ. ಯಂ.

... A TALLAM RELEASE ...

## ಈ ಸಂಚಿಕೆಯಲ್ಲಿ

ಡಿಸೆಂಬರ್ **4** ರಿಂದ

ಮೈಸೂರಿನ
10 ಕೇಂದ್ರಗಳಲ್ಲಿ
ಪ್ರದರ್ಶನ

ಆರ್.ಎಸ್.ಆರ್ ಪಿಕ್ಚರ್ಸ್ ರವರ

# ಜಾತಕಫಲ

ಕನ್ನಡ ಹಾಸ್ಯಮಯ ಸಾಮಾಜಿಕ ಚಿತ್ರ

ತಾರಾಗಣ:

ಆರ್.ನಾಗೇಂದ್ರ ರಾವ್... ಕೆ ಸಾರಂಗಪಾಣಿ
ಕೆ.ಸೂರ್ಯಕಲಾ........ ಟಿ ಕೆ ಬಾಲಚಂದ್ರ
ಕಮಲಾಬಾಯಿ. ಕೆ.ಆರ್.ಚೆಲ್ಲಂ. ಕೆ.ಎಸ್.ಕಮಲಂ
ಪಿ.ಡಿ.ಸಂಬಂದಂ.... ವಿಗಡಂ ಕೃಷ್ಣಮೂರ್ತಿ
ಗಣಪತಿಭಟ್ ಮೊದಲಾದವರು

ನಿರ್ದೇಶನ
ಆರ್. ನಾಗೇಂದ್ರ ರಾವ್

ಸ್ಟೂಡಿಯೋ
ಎವಿ.ಎಂ





FOR MYSORE STATE SOUTH CANARA COORG, HYDERABAD, CEDED DISTRICTS
**KARNATAKA FILMS LTD.** GANDHI NAGAR, BANGALORE-2

G.H. RAO

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್,
ವಡಪಳನಿ....ಮದ್ರಾಸ್-26.

# ಚಂದಮಾಮ

ಸಂಚಾಲಕರು:
'ಚಕ್ರಪಾಣಿ'

ಈ ಸಂಚಿಕೆಯೊಂದಿಗೆ ೧೧ ನೇ ಸಂಪುಟ ಮುಗಿಯುತ್ತದೆ. ಮುಂದಿನ ಸಂಪುಟದ ಸಂಚಿಕೆಯಲ್ಲಿ 'ಶಬ್ದವೇಧಿ' ಮುಗಿದು ಹೊಸ ಧಾರಾವಾಹಿ ಕಥೆಯನ್ನು ನೋಡುವಿರಿ. ಈ ಸಂಚಿಕೆಯಲ್ಲಿ ಪ್ರಕಟವಾದ 'ಮಹಾಪುರುಷ' ಕಥೆಯನ್ನು ಓದಿ ನೋಡಿದರೆ, ಎಂತಹ ಮಹಾತ್ಮನಾದರೂ ಮೇರೆ ಮೀರಿದನೆಂದರೆ ಅಪಾಯಕ್ಕೀಡಾಗುವನೆಂಬ ತತ್ವವು ನಿಮಗೆ ಗೊತ್ತಾದೀತು. ಶಕಪುರುಷನಾದ ಮಹಾತ್ಮಾ ಏಸುಕ್ರಿಸ್ತನು ದಯೆಯಿಂದ ದೈವಾಜ್ಞೆಯನ್ನು ಮೀರಿ ಒಂದು ಜೀವದಾನ ಮಾಡಿದುದರಿಂದಲೇ ಶಿಲುಬೆಗೇರಬೇಕಾಯಿತೆಂದರೆ, ಧರ್ಮವು ಎಷ್ಟು ಸೂಕ್ಷ್ಮವಾದುದು! ಹೀಗೆಯೇ ಇತರ ಕಥೆಗಳ ತತ್ವವನ್ನೂ ನೀವು ಸಾವಧಾನವಾಗಿ ಗ್ರಹಿಸಿಕೊಂಡು ಓದಬೇಕು.

ಸಂಪುಟ ೧೧ : ಡಿಸೆಂಬರ್ ೧೯೫೩ : ಸಂಚಿಕೆ ೬



# ಮೂಷಿಕ ಸುಭಾಷಿತ

ಖಡ್ಗಮೃಗವೊಂದಕೂ ದೊಡ್ಡಾನೆಯೊಂದಕೂ
ಮಾತಾಗಿ ಬಲು ದೊಡ್ಡ ಜಗಳ ಬಂತು.
ಅಡವಿಗಳ ಒಡೆತನವು ತನಗೆಂದು ನನಗೆಂದು
ಮೊರೆದುವೆರಡೂ ದ್ವಂದ್ವದಲ್ಲಿ ನಿಂತು.

ಕಂಡಿದಂ ನರಿಯಣ್ಣ 'ನೊಕ್ಕೊವೋ!' ಎನುತ್ತ
ಬಂದನಲ್ಲಿಗೆ ಬಿಳಿಯ ಝಂಡ ಹಿಡಿದು.
'ಬರುವನದಿಗೋ ಅಲ್ಲಿ ಗಣಪತಿಯ ವಾಹನಂ!
ಮೂಷಿಕೇಶ್ವರ ಗಗನದಿಂದಲಿಳಿದು!'

ಎಂದೊರೆಯೆ ನರಿಯಣ್ಣ, ನೋಡಲತ್ತ ಗಜೇಂದ್ರ,
ಮುಗಿಲ ಮೆಟ್ಟಿಲ ನಿಳಿದು ಇಲಿಯದೊಂದು,
ಬರುವುದನು ಕಾಣುತಲೆ ಆನೆ ಖಡ್ಗಿಗಳೆರಡು
ನಿಲಿಸಿದುವು ಯುದ್ಧ ಗೌರವಕೆಯೆಂದು.

'ನನ್ನ ತಲೆಯನುಕೊಂಡ ಮಾಗಣಪತೀದೇವ
ನನ್ನ ಘನತಗೆ ದೂತನಾಗಿ ಇಲಿಯ
ಅಟ್ಟಿರುವ ನೀ ಖಡ್ಗಮೃಗಕ್ಕೆ ತಪ್ಪದು ದಂಡ,
ಶಾಸ್ತಿಯಿನ್ನೀಗಿದರ ವಂಶವೆ ಲಯ!'

ಹೀಗೆ ಯಾ ಯಾನೆ ತನ್ನಲ್ಲಿ ತಾ ನೆನೆಯುತಿರೆ
ಇಲಿರಾಯ ನವರುಗಳ ಕಡೆ ನೋಡದೆ,
ಎತ್ತಲೇನೋ ಬಹಳ ಅವಸರಾತುರದಲ್ಲಿ
ಸಾಗಿಹೋಗುತ್ತಿರಲು, ತಡಮಾಡದೆ,

"ನವಗಿರಿನಂದ"

ಆನೆ ಮುಂದೋಡಿ ಇಲಿರಾಯ ಗಿದಿರಲಿ ನಿಂತು
ಸೊಂಡಿಲೇರಿಸಿ ನಮಿಸಿ ನುಡಿಯಿತಿಂತು:
'ಮೂಷಿಕೇಶ್ವರ, ನಿಮ್ಮ ದೇವ ಗಣಪತಿ ನಮ್ಮ
ಬಳಿಗೆ ಕಳುಹಿಲ್ಲವೇ? ಪೋಷಿರಿಂತು!'

ಅಚ್ಚರಿಯ ಲೆಂದಿ ಇಲಿ: 'ಅರರೆ ಬೆನಕನು ನಿಮ್ಮ
ಸಂಗತಿಯನೇ ಅರಿಯ, ಸರಿಯಿರತ್ತ!'
'ಏನಿದಚ್ಚರಿ! ನಮ್ಮ ಘೋರ ಯುದ್ಧವ ನಿಲಿಸೆ
ನೀವು ಬಂದಿಲ್ಲೆಂಬಿರಲ್ಲ—ಚಿತ್ರ!

ದೊಡ್ಡ ಪ್ರಾಣಿಗಳೆಮ್ಮ ದೊಡ್ಡ ಯುದ್ಧದ ಸುದ್ದಿ
ಬೆನಕದೇವನ ಕಿವಿಗೆ ಕೇಳಿಸದಿರೆ
ನಿಮ್ಮ ಕಳುಹಿದರೆತ್ತ?' ಎಂದು ಕೇಳಲು ಆನೆ
ಇಲಿಯೆಂದಿ 'ತಯ್ಯ ಬರಿನ್ಯೆ ಹಿರಿಯರೆ!—

ಅಲ್ಲೊಂದು ಮೂಲೆಯಲಿ ಹುಲ್ಲು ಬೀಜಕ್ಕಾಗಿ
ಜಗಳಬಂದಿಹುದು ಸಣ್ಣಿರುವೆಗಳಿಗೆ;
ಹೋಗಿ ಜಗಳವ ನಿಲಿಸಿ ಬಾರೆಂದು ಗಣದೇವ
ಎನ್ನ ಕಳುಹಿದ, ನಾನು ಬಂದೆ ನಿಳೆಗೆ.'

ಹೀಗೆಂದು ನಗುತಲೇ ಹೋದ ಮೂಷಿಕರಾಯ.
ಖಡ್ಗಿಯಾನೆಗಳೆರಡು ನಾಚಿ ಕುಗ್ಗಿ,
ದೇವನಿದಿರಲಿ ಹಿರಿದು ಕಿರಿದೆಂಬ ಭೇದವೇ
ಇಲ್ಲವೆಂದರಿತು ಬಾಳಿದುವು ತಗ್ಗಿ.



# ಮುಖಚಿತ್ರ

ಹಿರಿಯರ ಆದೇಶದಂತೆ ಪಾಂಡವರೈವರಿಗೂ ದ್ರೌಪದಿ ಪತ್ನಿಯಾದನಂತರ, ಅವರು ಹಸ್ತಿನಾವತಿಗೆ ತೆರಳಿದರು. ಅಲ್ಲಿ ಗುರುಹಿರಿಯರ ಪಂಚಾಯತನ ನಡೆದು, ಪಾಂಡವರು ಅರ್ಧರಾಜ್ಯಕ್ಕೆ ಅಧಿಪತಿಗಳಾಗಿ, ಇಂದ್ರಪ್ರಸ್ಥವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು.

ಆಗೊಮ್ಮೆ ನಾರದರು ಬಂದು ಪಾಂಡವರಿಗೆ ಹಿತಬೋಧೆಮಾಡುತ್ತ, ಸುಂದೋಪಸುಂದರ ಕಥೆಯನ್ನು ಹೇಳಿದರು. ಆ ಸುಪ್ರಸಿದ್ಧ ನೀತಿ ಬೋಧಕ ಕಥೆಯೇ ಈ ಸಂಚಿಕೆಯ ಮುಖಚಿತ್ರವಾಗಿ ಅಲಂಕೃತವಾಗಿದೆ.

ಆ ಸುಂದೋಪಸುಂದರು ಹಿರಣ್ಯಕಶಿಪುವಿನ ವಂಶದಲ್ಲಿ ಹುಟ್ಟಿದ ನಿಕುಂಭನ ಮಕ್ಕಳು. ಸಹೋದರರಾದ ಸುಂದೋಪಸುಂದರು ಒಬ್ಬರನ್ನೊಬ್ಬರು ಅಗಲದೆ ಅತ್ಯಂತ ಮೈತ್ರಿಯಿಂದ ಇದ್ದರು. ದೊಡ್ಡವರಾದಾಗ ಅವರಿಬ್ಬರೂ ತಪಸ್ಸಿಗಾಗಿ ತೆರಳಿ ಬ್ರಹ್ಮನನ್ನು ಕುರಿತು ಘನಘೋರ ತಪಸ್ಸನ್ನು ಮಾಡಿ, ತಮ್ಮಿಬ್ಬರಿಗೆ ತಮ್ಮಿಬ್ಬರಿಂದ ಹೊರತು ಬೇರೆ ಯಾವ ವಿಧವಾಗಿಯೂ ಮರಣಬಾರದಂತೆ ವರವನ್ನು ಪಡೆದರು.

ಹೀಗೆ ವರಬಲದಿಂದ ಗರ್ವಿಷ್ಠರಾಗಿ, ದೇವಲೋಕಕ್ಕೆ ದಂಡೆತ್ತಿ ಇಂದ್ರಾದಿದೇವತೆಗಳನ್ನು ಜಯಿಸಿದರು. ಭೂಮಿಯಲ್ಲಿ ಸಾಧುಸಂತರನ್ನು ನಾನಾ ಹಿಂಸೆಗೆ ಗುರಿಪಡಿಸಿದರು. ಅವರ ಬಾಧೆಯನ್ನು ತಾಳಲಾರದೆ ದೇವತೆಗಳೂ ಋಷಿಗಳೂ ಬ್ರಹ್ಮನ ಸನ್ನಿಧಿಯಲ್ಲಿ ಮೊರೆಯಿಟ್ಟರು. ಆಗ ಬ್ರಹ್ಮನು ವಿಶ್ವಕರ್ಮನಿಂದ ಮೋಹನಾಕಾರವಾದ ಒಂದು ಸ್ತ್ರೀರೂಪವನ್ನು ಸೃಷ್ಟಿಸಿ, ಅವಳನ್ನು ಕುರಿತು "ತಿಲೋತ್ತಮೆ, ನೀನು ಭೂಮಿಗೆ ಹೋಗಿ ಮದಾಂಧರಾದ ಸುಂದೋಪಸುಂದರನ್ನು ಹತಗೊಳಿಸಿ ಬಾ" ಎಂದು ಆಣತಿಯಿತ್ತು ಕಳಿಸಿದನು.

ತಿಲೋತ್ತಮೆ ಸಮಯ ನೋಡಿ ಆ ರಾಕ್ಷಸ ಸಹೋದರರು ಉದ್ಯಾನದಲ್ಲಿ ಉತ್ಸಾಹದಿಂದಿರುವಾಗ ಅವರಿದಿರು ಬಂದಳು. ಭುವನ ಮೋಹಕವಾದ ಅವಳ ಸೌಂದರ್ಯವನ್ನು ನೋಡಿ ಇಬ್ಬರೂ ಪರವಶರಾದರು. ಒಡನೇ ಮದಾಂಧ ಸುಂದನು ಅವಳ ಬಲಗೈಯನ್ನು ಹಿಡಿದು "ತಮ್ಮಾ ಉಪಸುಂದ, ಇವಳೇ ನನ್ನ ಪತ್ನಿ" ಎಂದ. "ಅಲ್ಲ ನನ್ನ ಪತ್ನಿ" ಎಂದ ಉಪಸುಂದ. ಹೀಗೆ ಎಡೆಬಿಡದ ಮೈತ್ರಿಯಿಂದಿದ್ದ ಅವರಿಬ್ಬರಲ್ಲಿ ವಾಗ್ವಾದವೆದ್ದು, ಕೈಕೈ ಕಲೆತು, ಘೋರಕಾಳೆಗಕ್ಕೆ ಬಿದ್ದರು. ಮತ್ತೇನು? ಇಬ್ಬರೂ ಒಬ್ಬರನ್ನೊಬ್ಬರು ಹೊಡೆದುಕೊಂಡು ಸತ್ತುಬಿದ್ದರು.

ತಿಲೋತ್ತಮೆಯ ಕೆಲಸ ಮುಗಿದು ಅವಳು ದೇವಲೋಕಕ್ಕೆ ಹೋಗಿ ಸೇರಿದಳು. ದೇವತೆಗಳೂ ಸಾಧುಜನರೂ ಸಮಾಧಾನದ ಶ್ವಾಸಬಿಟ್ಟು ನಿರ್ಭಯರಾದರು.

ಈ ನೀತಿಕಥೆಯನ್ನು ನಾರದರು ತಮಗೇಕೆ ಹೇಳಿದರೆಂಬುದನ್ನು ಗ್ರಹಿಸಿಕೊಂಡು, ಪಾಂಡವರು ನಾರದರನ್ನು ಆದರೋಪಚಾರಗಳಿಂದ ಬೀಳುಕೊಟ್ಟರು.




**ಪೂ**ರ್ವಕಾಲದಲ್ಲಿ 'ಬೆತ್ಲಹಾಮ್' ಎಂಬ ಗ್ರಾಮದ ಸಮೀಪದಲ್ಲಿ ಗೊಲ್ಲ ಹುಡುಗರು ಕೆಲವರು ಕುರಿಮಂದೆಯನ್ನು ಕಾಯುತ್ತಿದ್ದರು. ಒಂದು ದಿನ ಅವರಿಗೆ ಆಕಾಶದ ಒಂದು ಮೂಲೆಯಲ್ಲಿ ದೊಡ್ಡ ಹೊಳೆಯುವ ಚುಕ್ಕೆಯೊಂದು ಕಾಣಬಂತು. ಇದೇನಿರಬಹುದೆಂದು ಅವರು ಭಯದಿಂದಲೂ ಆಶ್ಚರ್ಯದಿಂದಲೂ ಇರುವಾಗ ಒಬ್ಬ ದೇವದೂತನು ಇಳಿದು ಬಂದು ಅವರಿದಿರು ನಿಂತನು.

"ಹುಡುಗರೆ, ಭಯಪಡಬೇಡಿ. ನಮ್ಮೆಲ್ಲರಿಗೂ ದೇವನಾದ ಏಸುಕ್ರಿಸ್ತನು ಈಗ ಜನ್ಮಿಸಿದ್ದಾನೆ. ಆದುದರಿಂದಲೇ ಆ ದೊಡ್ಡ ನಕ್ಷತ್ರವು ಹಾಗೆ ಹೊಳೆಯುತ್ತಿದೆ" ಎಂದು ಹೇಳಿ ಅದೃಶ್ಯನಾದನು. ದೇವದೂತನ ಮಾತು ಕೇಳಿ ಉಬ್ಬಿದ ಗೊಲ್ಲ ಹುಡುಗರು ಆ ಹೊಳೆಯುವ ಚುಕ್ಕೆಯ ದಿಕ್ಕಿಗೆ ಹೋಗ ತೊಡಗಿದರು. ಆ ಚುಕ್ಕೆ ಅನೇಕ ಮಂದಿಗೆ ಕಾಣಿಸಿತು. ಅದನ್ನು ನೋಡಿದವರಲ್ಲಿ ಮೂವರು ಮಹಾ ಜ್ಞಾನಿಗಳಾಗಿದ್ದರು. ಪ್ರಪಂಚವನ್ನು ಉದ್ಧರಿಸಬಲ್ಲ ಮಹಾಪುರುಷ ಏಸುಕ್ರಿಸ್ತನು ಹುಟ್ಟಿದನೆಂದು ಅವರು ಹೋಗಿ ತಮ್ಮ ಪ್ರಭುವಾದ 'ಹಿರಾಡ್' ದೊರೆಗೆ ಬಿನ್ನವಿಸಿದರು.

'ಆ ಕ್ರಿಸ್ತ ಎಲ್ಲಿದ್ದಾನೋ ನೋಡಿ ಬನ್ನಿ. ಬಂದು ನನಗೆ ಹೇಳಿ, ನಾನೂ ಹೋಗಿ ಅವನ ದರ್ಶನ ಮಾಡುತ್ತೇನೆ' ಎಂದನು ಹಿರಾಡ್. ಕೂಡಲೇ ಆ ಮೂವರು ಜ್ಞಾನಿಗಳೂ ಒಂಟೆಗಳಮೇಲೆ ಹೊರಟು ಕ್ರಿಸ್ತನನ್ನು ನೋಡ ಹೋದರು.

ಹಿರಾಡ್ ಪ್ರಭು ಜ್ಞಾನಿಗಳೊಡನೆ ಹಾಗೆ ಹೇಳಿದನೇ ಹೊರತು ನಿಜಕ್ಕೂ ಅವನಿಗೆ ಕ್ರಿಸ್ತನಮೇಲೆ ಭಕ್ತಿಯಿರಲಿಲ್ಲ. ಅವನು ಬಹು ಕ್ರೂರ: ಕಠಿನಾತ್ಮ. ಕ್ರಿಸ್ತನು ಹುಟ್ಟಿರುವ ಸುಳಿವು ತಿಳಿದು ತಾನೇ ಅಲ್ಲಿಗೆ ಹೋಗಿ ಆ ಹಸುಮಗವನ್ನು ಹತ ಮಾಡಬೇಕೆಂಬುದು ರಾಜನ ದುರುದ್ದೇಶ.

ಎಸ್. ಮಹಾಬಲಶೆಟ್ಟಿ, ಬೊಂಬಾಯಿ






ಗೊಲ್ಲ ಹುಡುಗರ ಸಹಾಯದೊಂದಿಗೆ ಆ ಮೂವರು ಜ್ಞಾನಿಗಳೂ ಆ ಚುಕ್ಕೆ ಹೊಳೆಯುವ ದಿಕ್ಕಿಗೆ ಹೋದರು. ಕೆಲವು ದಿನ ಪ್ರಯಾಣ ಮಾಡಿದ ಮೇಲೆ, ಅವರೊಂದು ಸತ್ರವನ್ನು ಸೇರಿಕೊಂಡರು. ಕ್ರಿಸ್ತನ ತಾಯಿ ಮೇರಿಯೂ, ತಂದೆ ಜೋಸೆಫನೂ ಆ ಸತ್ರದಲ್ಲಿಯೇ ಉಳಕೊಳ್ಳಬೇಕೆಂದಿದ್ದರು. ಆದರೆ ಅಲ್ಲಿ ಜನಸಮೂಹವು ಹೆಚ್ಚಾಗಿದ್ದುದರಿಂದ ಅವರು ಒಂದು ಅಶ್ವಶಾಲೆಯಲ್ಲಿ ವಾಸಮಾಡಬೇಕಾಯಿತು. ಅಲ್ಲಿಯೇ ಕ್ರಿಸ್ತನು ಹುಟ್ಟಿದ್ದ.

ಮೂವರು ಜ್ಞಾನಿಗಳೂ ಕ್ರಿಸ್ತ ಶಿಶುವನ್ನು ನೋಡಿ ತನ್ಮಯರಾಗಿ ಹೋದರು. ಆ ಮಹಾನುಭಾವ ಶಿಶುವಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಆದರೆ ಆ ಜ್ಞಾನಿಗಳು ಮಾತುಕೊಟ್ಟಂತೆ ರಾಜನಿಗೆ ತಾವು ಕ್ರಿಸ್ತನನ್ನು ನೋಡಿಬಂದ ಸಂಗತಿ ಹೇಳಲೇ ಇಲ್ಲ. ಹೇಳಿದರೆ ಅವನು ಶಿಶುವನ್ನು ಸಂಹರಿಸುವನೆಂದು ಅವರಿಗೆ ಗೊತ್ತಿತ್ತು.

ಅತ್ತ ಹಿರಾಡ್ ಈ ಜ್ಞಾನಿಗಳು ಹಿಂದಿರುಗಿ ಬರುವ ದಾರಿಯನ್ನು ನೋಡಿ ನೋಡಿ ಬೇಸತ್ತನು. 'ಓಹೊ, ಮೋಸವಾಯಿತು!' ಎಂದುಕೊಂಡು ಉಗ್ರನಾದನು. ಕೂಡಲೇ ತನ್ನ ಸೈನಿಕರನ್ನು ಕರೆದು "ನೀವು ಈಗಿಂದೀಗಲೇ ರಾಜ್ಯದ ನಾಲ್ಕು ಮೂಲೆಗಳಿಗೂ ಹೋಗಿ ಕಣ್ಣಿಗೆ ಬಿದ್ದ ಪ್ರತಿ ಶಿಶುವನ್ನೂ ಕೊಂದು ಹಾಕಬೇಕು" ಎಂದು ಆಜ್ಞಾಪಿಸಿದನು. ಹೀಗೆ ಹುಟ್ಟಿದ ಶಿಶುಗಳನ್ನೆಲ್ಲಾ ಕೊಂದರೆ, ಕ್ರಿಸ್ತಶಿಶುವೂ ಸತ್ತು, ತನ್ನ ಪೀಡೆ ತೊಲಗುವುದೆಂದು ರಾಜನ ಉದ್ದೇಶ.

ಇಲ್ಲಿ ದೊರೆ ಹೀಗೆ ಅಡಾವುಡಿಯಲ್ಲಿರುವಾಗ ಅಲ್ಲಿ ಕ್ರಿಸ್ತು ಹುಟ್ಟಿದಲ್ಲಿ ಒಂದು ವಿಚಿತ್ರ ಜರುಗಿತು: ಜೋಸೆಫನಿಗೆ ದೇವರು ರಾತ್ರಿ ಕನಸಿನಲ್ಲಿ ಕಾಣಿಸಿ "ನಿಮಗೆ ಹುಟ್ಟಿದ ಕ್ರಿಸ್ತು ಶಿಶು ಲೋಕೋದ್ಧಾರಕನೆಂದು ತಿಳಿಯಿರಿ. ತಾಯಿಯನ್ನೂ ಮಗುವನ್ನೂ ಕೂಡಲೇ ಸ್ಥಳ ತಪ್ಪಿಸಿ ಬೇರೊಂದು ಸ್ಥಳಕ್ಕೆ ಕೊಂಡೊಯ್ಯಬೇಕು." ಎಂದು ಎಚ್ಚರಿಸಿದನು. ಜೋಸಫ್ ಕ್ಷಣಕೂಡ ತಳುವದೆ, ಮೇರೀ ಮಾತೆಯನ್ನೂ ಮಗುವನ್ನೂ ಒಂದು ಗಾಡಿಯಲ್ಲಿ ಏರಿಸಿಕೊಂಡು, ಈಜಿಪ್ಟ ದೇಶಕ್ಕೆ ಹೋಗಿ ಸೇರಿದನು. ಹಿರಾಡ್‌ದೊರೆ



ಸಾಯುವ ಸುದ್ದಿ ತಿಳಿಯುವವರೆಗೂ ಅವರು ಅಲ್ಲಿಯೇ ಗುಟ್ಟಾಗಿ ಕಾಲಕ್ಷೇಪ ಮಾಡಿದರು.

ಇನ್ನು ಚಿಂತಿಲ್ಲ; ಗಂಡ ತಪ್ಪಿತು, ಎಂಬ ನಂಬುಗೆ ಹುಟ್ಟಿದಮೇಲೆ ಜೋಸೆಫ್ ತನ್ನ ಕುಟುಂಬವನ್ನು 'ನಜರತ್' ಎಂಬಲ್ಲಿಗೆ ಕರೆದೊಯ್ದನು. ಕ್ರಿಸ್ತನು ಬೆಳೆದು ದೊಡ್ಡವನಾದುದು ಇಲ್ಲಿಯೇ. ಕ್ರಿಸ್ತನು ಜತೆ ಹುಡುಗರೊಂದಿಗೆ ಆಡುತ್ತಾ ಹಾಡುತ್ತಾ ಕಲಿಯುತ್ತಾ, ತಂದೆ ಮಾಡುವ ಬಡಗಿ ಕೆಲಸಕ್ಕೆ ಸಹಕರಿಸುತ್ತಾ ಇರುತ್ತಿದ್ದ.

ಕ್ರಿಸ್ತನು ನೋಡಲಿಕ್ಕೆ ಎಲ್ಲಾ ಹುಡುಗರಂತೆಯೇ ಇದ್ದ; ಆದರೆ ಬುದ್ಧಿಯಲ್ಲಿ ಬೃಹಸ್ಪತಿ. ಎಂತಹ ಪಂಡಿತರು ಬಂದು ಎಷ್ಟು ಕಠಿನ ಪ್ರಶ್ನೆ ಹಾಕಿದರೂ, ಅವೆಲ್ಲಕ್ಕೂ ಸರಿಯಾದ ಸಮಾಧಾನ ಹೇಳುವಷ್ಟು ಶಕ್ತಿ ಅವನಿಗಿತ್ತು.

ಒಮ್ಮೆ ಕ್ರಿಸ್ತನೊಂದಿಗೆ ತಂದೆತಾಯಿಗಳು ಯಾತ್ರೆಗೆ ಹೊರಟರು. ಆದರೆ, ಮನೆಗೆ ಹಿಂದಿರುಗಿ ಬರುವಾಗ ಕ್ರಿಸ್ತ ಹುಡುಗ ಕಾಣದೆ ತಪ್ಪಿಸಿಕೊಂಡುಬಿಟ್ಟಿದ್ದ. ಮೂರು ದಿನಗಳ ತನಕ ತಂದೆತಾಯಿಗಳು ಬುದ್ಧಿ ಕೆಟ್ಟು ಅಹೋರಾತ್ರಿ ಮಗನನ್ನು ಹುಡುಕಿದರು.

ಆದರೆ, ಕ್ರಿಸ್ತು ಆಗಲೇ ದೇಶಸಂಚಾರ ಪ್ರಾರಂಭಮಾಡಿದ್ದ. ಆಗ ಅವನು ಬೋಧಿಸಿದ ಪ್ರೇಮಸೂತ್ರವು ಎಲ್ಲರಿಗೂ ಆಪ್ಯಾಯನವಾಗಿತ್ತು. ಆದುದರಿಂದ ಹಲವಾರು ಜನರು ಅವನ ಬೋಧನೆಯನ್ನು ಅನುಸರಿಸ ತೊಡ




ಗಿದರು ಆ ಮಹಾನುಭಾವನು ತನ್ನ ಸಂಚಾರದಲ್ಲಿ ಎಷ್ಟೋ ಕುರುಡರಿಗೆ ಕಣ್ಣು ಕೊಟ್ಟನು. ಕುಂಟರಿಗೆ ಕಾಲುಕೊಟ್ಟನು. ಮತ್ತೆಷ್ಟೋ ಲೋಕೋಪಕಾರದ ಮಹಿಮೆಗಳನ್ನು ತೋರಿಸಿದನು.

ಏಸುಪ್ರಭುವಿನ ಮಹೋಪದೇಶಗಳು ಬೆಸ್ತರಿಗೂ, ವ್ಯಾಪಾರಿಗಳಿಗೂ, ಮತ್ತು ಜೀವನಯಾತ್ರೆಯಲ್ಲಿ ತಾಪತ್ರಯ ಪಡುತ್ತಿರುವ ಎಲ್ಲರಿಗೂ ಹಿಡಿಸಿತು. ಎಲ್ಲೆಂದರಲ್ಲಿ ಜನರು ಗುಂಪುಗುಂಪಾಗಿ ಸೇರಿ ಕ್ರಿಸ್ತಬೋಧೆಗಳನ್ನು ಕೇಳುತ್ತಿದ್ದರು. ಬಹಳಮಂದಿ ಅವರ ಕೆಲಸಗಳನ್ನು ಬಿಟ್ಟು ಕ್ರಿಸ್ತನ ಶಿಷ್ಯರಾದರು. ಹೀಗೆ ಅವನು ಬಲಶಾಲಿಯಾಗುವುದು ದೊರೆಯ ಅಸೂಯೆಗೆ ಕಾರಣವಾಯಿತು.

ಯಾವಕಾಲದಲ್ಲಿಯೂ ದುಷ್ಟರು ಇದ್ದೇ ಇರುತ್ತಾರಷ್ಟೆ; ಕ್ರಿಸ್ತನ ಉಪದೇಶಗಳು ಕೆಲವುಮಂದಿ ದುರ್ಮಾರ್ಗಿಗಳಿಗೆ ಹಿಡಿಸಲಿಲ್ಲ. ರಾಜನೂ, ಅವನ ಪರಿವಾರವೂ ಎದುರು ತಿರುಗಿ ಕ್ರೈಸ್ತವಮತಕ್ಕೆ ವಿರುದ್ಧವಾಗಿ ದುಷ್ಪ್ರಚಾರ ಪ್ರಾರಂಭಿಸಿದರು. ಕಡೆಗೆ ಆ ಕ್ರೂರಿಗಳು ಕಠಿನರಾಗಿ ಕ್ರಿಸ್ತನನ್ನು ಹಿಡಿದು ಸಿಲುಬೆಗೇರಿಸಿ ಕೊಲ್ಲಲಿಕ್ಕೂ ಸಿದ್ಧರಾದರು!

ಸಿಲುಬೆಗೇರಿಸುವುದೆಂದರೆ, ಅವನನ್ನು ನಿಲ್ಲಿಸಿ ಕೈಗಳೆರಡನ್ನೂ ಚಾಚಿಸಿ, ಆಣಿಗಳನ್ನು ಹೊಡೆದು ಹಿಂಸೆ ಮಾಡಿದರು. ಇಷ್ಟು ಮಾಡಿದರೂ ಆ ಕ್ರೂರರ ಮೇಲೆ ಕೂಡಾ ಕ್ರಿಸ್ತನಿಗೆ ಕೋಪ ಬರಲಿಲ್ಲ; ಅವರಿಗೆ ಪ್ರೇಮ ಸಂದೇಶವನ್ನೇ ಬೋಧೆ ಮಾಡಿದ!

ಕ್ರಿಸ್ತನನ್ನು ಸಿಲುಬೆಗೇರಿಸಿದ ಮೂರನೇ ದಿನ, ಅವನು ತನ್ನ ಶಿಷ್ಯಕೋಟಿಗೆಲ್ಲಾ ಸಜೀವವಾಗಿ ದರ್ಶನವಿತ್ತು ಸಮಾಧಾನ ಪಡಿಸಿದನು. ಬದ್ಧಶತ್ರುವಿನ ಮೇಲಾದರೂ ಹಗೆ ಸಾಧಿಸುವುದು ಸರಿಯಲ್ಲವೆಂದೇ ಆತನು ಬೋಧೆ ಮಾಡಿದನು. ಇಂತಹ ಅವತಾರ ಪುರುಷನಾದ ಕ್ರಿಸ್ತನನ್ನು ಸಿಲುಬೆಗೇರಿಸಲು ಒಂದು ವಿಶೇಷ ಕಾರಣವಿತ್ತು; ಪೂರ್ವದಲ್ಲಿ ದೇವರು ಕ್ರಿಸ್ತನಿಗೆ ಎಲ್ಲಾ ಮಹಿಮೆಗಳನ್ನು ಕೊಟ್ಟರೂ, ಪ್ರಾಣ ಕೊಡಲಿಕ್ಕೆ ಮಾತ್ರ ಅಧಿಕಾರವೀಯಲಿಲ್ಲ. ಆದರೆ ದಯಾಮಯನಾದ ಕ್ರಿಸ್ತದೇವನು ದೇವನಾಜ್ಞೆಯನ್ನು ಮೀರಿ ಒಂದೇ ಒಂದು ಜೀವಿಗೆ ಪ್ರಾಣ ಕೊಟ್ಟಿದ್ದ. ಅದರಿಂದಲೇ ಅವನಿಗೆ ಈ ಶಿಕ್ಷೆಯಾಯಿತೆಂದು ಹೇಳುತ್ತಾರೆ.

ಕ್ರಿಸ್ತನು ಬೋಧಿಸಿದ ಮತವೇ ಕ್ರೈಸ್ತವ ಮತ. ಈ ಮತವು ಪ್ರಪಂಚದಲ್ಲೆಲ್ಲಾ ಹರಡಿಕೊಂಡಿದೆ. ಮಹಾನುಭಾವನಾದ ಕ್ರಿಸ್ತನು ಮತ ಪ್ರಚಾರಕ ಮಾತ್ರವೇ ಅಲ್ಲ, ಶಕಪುರುಷನಾಗಿದ್ದಾನೆ. ಈಗ ಹೆಚ್ಚು ಕಡಮೆ ಪ್ರಪಂಚದಲ್ಲೆಲ್ಲಾ ಕ್ರಿಸ್ತಶಕವೇ ಅಮಲಿನಲ್ಲಿದೆ.

ಕ್ರಿಸ್ತನನ್ನು ಸಿಲುಬೆಗೆ ಏರಿಸಿದ ಆ ಸ್ವರೂಪವೇ ಕ್ರೈಸ್ತವ ಮತಕ್ಕೆ ಚಿಹ್ನೆಯಾಗಿ ಏರ್ಪಟ್ಟಿದೆ.






[ಕರುಣಳನ್ನು ಬಲವಂತವಾಗಿ ಮದುವೆಯಾಗಬೇಕೆಂದಿದ್ದ ಕಬಂಧವರ್ಮನು, ಚಂಡಿದಾಸನ ಪರಿವಾರದವರ ಬಾಣಕ್ಕೆ ಬಲಿಯಾಗುವನು. ಸೋಮಶರ್ಮ ಗಾಯಗೊಳ್ಳುವನು. ಸನ್ಯಾಸಿಯ ವೇಷದಲ್ಲಿದ್ದ ವಿಜಯವರ್ಮ ಅಣ್ಣಯ್ಯರನ್ನು ಭೀಮವರ್ಮನು ಗುರುತಿಸಿ ಅವರಿಗೆ ನೇಣುಶಿಕ್ಷೆ ವಿಧಿಸುವನು. ಆದರೆ ಆ ಶಿಕ್ಷೆಯನ್ನು ಜಾರಿಗೆ ತರುವ ಸಮಯಕ್ಕೆ ದೇವಪುರದ ಜಮೀನುದಾರನು ಅಲ್ಲಿಗೆ ಬಂದು ಹಂತಕರನ್ನು ವಿಚಾರಿಸುವ ಹಕ್ಕು ತನಗೆಮಾತ್ರವಿದೆಯೆಂದು ಭೀಮವರ್ಮನೊಂದಿಗೆ ವಾದಿಸಿ, ಅವರಿಬ್ಬರನ್ನೂ ತನ್ನ ಭವನಕ್ಕೆ ಕರೆದೊಯ್ಯುವನು.]

**ಮೊ**ದಲಿನಿಂದಲೂ ದೇವಪುರದ ಜಮೀನುದಾರನು ಕೊಸಲ್ಪೂರು ಪಕ್ಷಕ್ಕೇ ಸೇರಿದಾತ. ಅನುಕೂಲವಾಗಿರುವ ಪಕ್ಷದೊಂದಿಗೆ ಭುಜ ಕೂಡಿಸುವ ಭೀಮವರ್ಮನೆಂದರೆ ಆತನಿಗೆ ಕಡುಕೋಪ.

ಬಿಸಲ್ಪೂರು ರಾಜನ ಪಕ್ಷದವರು ಬಲಶಾಲಿಗಳು. ಅವರನ್ನು ಸೋಲಿಸಲು ಯಾರು ಎಷ್ಟೇ ಸಹಾಯಮಾಡಿದರೂ ತಮಗೇ ಉಪಕಾರವಾಗುವುದೆಂದು ಕೊಸಲ್ಪೂರಿನವರು ಭೀಮವರ್ಮನನ್ನು ತಮ್ಮ ಕಾರ್ಯಕ್ಕೆ ಉಪಯೋಗಿಸಿಕೊಳ್ಳುತ್ತಿರುವರು. ದೇವಪುರದ ಜಮೀನುದಾರರಿಗೆ ಭೀಮವರ್ಮನು ಮಹಾ ದಗಾಕೋರನೆಂಬ ವಿಷಯ ತಿಳಿದಿತ್ತು. ಸಮಯ ಸಿಕ್ಕಿತಾದುದರಿಂದ ಅವನ ಕಡುವಿರೋಧಿಯಾದ ವಿಜಯವರ್ಮನ ಗುಂಪಿನ ಮುಖಾಂತರ ಅವನ ರಹಸ್ಯಗಳನ್ನೆಲ್ಲಾ ತಿಳಿಯಲು ಕುತೂಹಲಗೊಂಡಿದ್ದ.

ಆ ಅವಕಾಶ ಈಗ ಲಭ್ಯವಾಯಿತು. ಬಹಳ ಉತ್ಸಾಹವಾಯಿತು ಜಮೀನುದಾರನಿಗೆ. ನ್ಯಾಯಸ್ಥಾನವಾಗಿ ಏರ್ಪಡಿಸಿದ್ದ ಮಂದಿರ




ದಲ್ಲಿ ದೇವಪುರದ ಜಮೀನುದಾರನು ಆಸನಾರೂಢನಾಗಿದ್ದ.

ವಿಜಯವರ್ಮ ಮತ್ತು ಅಣ್ಣಯ್ಯರನ್ನು ಸೈನಿಕರು ಆತನ ಮುಂದೆ ತಂದು ನಿಲ್ಲಿಸಿದರು. 'ಇವರ ಕೈಯಲ್ಲಿ ಸಿಲುಕಿಕೊಂಡಿದ್ದೇವೆ. ದೇವರ ಹೊರತು ನಮ್ಮನ್ನು ಮತ್ಯಾರೂ ಇನ್ನು ಕಾಪಾಡಲಾರರು' ಎಂದು ಅವರಿಬ್ಬರೂ ನೆನೆಸಿದ್ದರು. ರಣರಂಗದಲ್ಲಿ ವೀರ ಮರಣ ಹೊಂದಬೇಕಾದ ತನಗೆ ಊರು ಕೇರಿಯಿಲ್ಲದೆಡೆ ಸಾವು ಪ್ರಾಪ್ತಿಸುತ್ತಿರುವುದಕ್ಕಾಗಿ ವಿಜಯವರ್ಮ ಸಂತಾಪಗೊಂಡ.

ದೇವಪುರದ ಜಮೀನುದಾರನು ಅಣ್ಣಯ್ಯ ಮತ್ತು ವಿಜಯವರ್ಮರನ್ನು ದಿಟ್ಟಿಸಿ ನೋಡಿ ಹೀಗೆಂದು ಪ್ರಶ್ನೆಮಾಡಿದ:

"ನಿಜ ನುಡಿಯಿರಿ. ನೀವು ಯಾವ ಪಕ್ಷದವರು?—ಮರೆಮಾಜಬೇಡಿ"

ಇಂತಹ ಸುಲಭವಾದ ಪ್ರಶ್ನೆ ಬರುವುದೆಂದು ಅಣ್ಣಯ್ಯನಾಗಲೀ ವಿಜಯವರ್ಮನಾಗಲಿ ಭಾವಿಸಿರಲಿಲ್ಲ. ತಮ್ಮನ್ನು ಬಿಸಲ್ಪೂರಿನವರೆಂದು ಭೀಮವರ್ಮ ಪರಿಚಯಮಾಡಿಕೊಟ್ಟ ವಿಷಯ ದೇವಪುರದ ಜಮೀನುದಾರನು ನಂಬಿರುವನೆಂದುಕೊಂಡಿದ್ದ ಅವರಿಗೆ ಈ ಪ್ರಶ್ನೆ ಆಶ್ಚರ್ಯವನ್ನುಂಟುಮಾಡಿತು. ಆದರೂ ವಿಜಯ ಹೇಳಲೇಬೇಕು. ಸುಳ್ಳಾಡಿ ತಪ್ಪಿಸಿಕೊಳ್ಳುವಂತಿಲ್ಲ. ತಮ್ಮನ್ನು ಕೊಸಲ್ಪೂರು ಪಕ್ಷದವರು ಹಿಡಿದು ಬಂಧಿಸಿರುವುದರಿಂದ ತಾವು ಬಿಸಲ್ಪೂರಿನವರೆಂದು ಸ್ಪಷ್ಟವಾದಂತೆ ತಾನೇ?

"ನಾನು ಬಿಸಲ್ಪೂರಿನವನು. ಈತ ಯಾವ ಗುಂಪಿಗೂ ಸೇರಿದವನಲ್ಲ. ಒಂದಾನೊಂದು ಸಂದರ್ಭದಲ್ಲಿ ನನ್ನ ಸ್ನೇಹಿತನಾದ. ಆಗಿನಿಂದ ನನಗೆ ಸಹಾಯಕನಾಗಿದ್ದಾನೆ. ಈತನ ಹೆಸರು ಅಣ್ಣಯ್ಯ, ಕಸಬಿನಲ್ಲಿ ಅಂಬಿಗ. ಬಹಳ ಒಳ್ಳೆಯವ."

ಮುಚ್ಚುಮರೆಯಿಲ್ಲದೆ ವಿಜಯವರ್ಮನಿತ್ತ ಜವಾಬಿನಿಂದ ದೇವಪುರದ ಜಮೀನುದಾರನು ತೃಪ್ತಿಗೊಂಡಂತೆ ಕಾಣಿಸಿತು. ಆತನ ಮುಖದಲ್ಲಿ ಕಿರುನಗೆ ಮೂಡಿತು.

"ನೀನು ಅಭಯವರ್ಮನಿಗೆ ತಕ್ಕ ಮಗನೆನ್ನಿಸಿಕೊಂಡೆ ಕಣಯ್ಯಾ!" ಎಂದು, ಹೀಗೆ ಮುಂದು ವರೆಸಿದ.

"ನಿನ್ನ ತಂದೆಯನ್ನು ನಾನು ಬಲ್ಲೆ. ಕಾಲಪರಿಸ್ಥಿತಿಗೆ ಹೊಂದಿಕೊಂಡು ವರ್ತಿಸದಿದ್ದರೆ ಎಷ್ಟು ಕಷ್ಟವೆಂಬುದಕ್ಕೆ ನಿನ್ನ ತಂದೆಯೇ ಒಂದು ಉದಾಹರಣೆ. ಚಿತ್ರಹಿಂಸೆಗೆ ಸಿಲುಕಿ ಆತನು ಮರಣ ಹೊಂದಿದ ಸಂಗತಿ ಎಲ್ಲರೂ ಅರಿತಿರುವ ವಿಷಯವೇ! ನಾನು ಕೊಸಲ್ಪೂರಿನವನು. ಆದರೂ ನಿನ್ನನ್ನು ಕ್ಷಮಿಸಿಬಿಟ್ಟು ಬಿಡುತ್ತೇನೆ"

"ಹಾಗಾದರೆ ಅಣ್ಣಯ್ಯನ ವಿಷಯವೇನು?" ಎಂದ ವಿಜಯವರ್ಮ, ಜಮಿಾನುದಾರನ ಮಾತಿನ ಅರ್ಥವನ್ನು ಗ್ರಹಿಸಿ.

"ಬಿಡಬೇಕಾಗಿಲ್ಲ. ಅವನ ವಿಚಾರ ನಾನು ತುಂಬಾ ದಿನಗಳಿಂದ ಕೇಳುತ್ತಿರುವೆನು. ಈ ಪ್ರಾಂತ್ಯದಲ್ಲಿ ಅಂತಹ ದಗಾಕೋರರಬೇರೊಬ್ಬನಿಲ್ಲ. ನೇಣು ಹಾಕಿದರೆ ಮೊದಲು ತುಸತೊಂದರೆಯಾದರೂ ಅವನಿಗೂ ಇತರರಿಗೂ ತರುವಾಯ ಎಷ್ಟೋ ಹಾಯಾಗಿರುತ್ತದೆ."

ಜಮಿಾನುದಾರನ ಮಾತು ಕೇಳುತ್ತಿದ್ದರೆ ಅಣ್ಣಯ್ಯನಿಗೆ ನಿಜವಾಗಿ ನೇಣುಹಗ್ಗ ಕೊರಳಿಗೆ ಬಿಗಿದಂತಿತ್ತು. ದೈನ್ಯತೆಯಿಂದ ವಿಜಯನ ಕಡೆ ನೋಡಿದ.

ಆಗ ವಿಜಯವರ್ಮನು ಧೈರ್ಯದಿಂದ ಜಮಿಾನುದಾರನನ್ನು ಉದ್ದೇಶಿಸಿಗಂಭೀರವಾಣಿಯಿಂದ ಹೀಗೆಂದ:

"ನಿಮ್ಮ ದಯೆಗೆ ಪಾತ್ರವಾದುದಕ್ಕೆ ನನಗೆ ಹೆಮ್ಮೆಯಾಗಿದೆ. ಸತ್ಯವಾಗಿ ಹೇಳಬೇಕಾದರೆ




ನನಗೆ ಕೊಸಲ್ಪೂರು—ಬಿಸಲ್ಪೂರು ರಾಜವಂಶಗಳ ನಡುವಿನ ಹೊಡೆದಾಟದಲ್ಲಿ ಆಸಕ್ತಿಯಿಲ್ಲ. ಭೀಮವರ್ಮ ಸೋಮಶರ್ಮರು ನನ್ನ ತಂದೆಗೆ ಮತ್ತು ನನಗೆ ಮಾಡಿರುವ ಅನ್ಯಾಯಗಳಿಗಾಗಿ ಹಗೆ ತೀರಿಸಿಕೊಳ್ಳಬೇಕೆಂಬುದು ನನ್ನ ಉದ್ದೇಶ. ಅಷ್ಟೇ. ನನ್ನನ್ನು ಕ್ಷಮಿಸುವುದಾದರೆ ನನ್ನ ಮಿತ್ರನಾದ ಅಣ್ಣಯ್ಯನನ್ನೂ ಕ್ಷಮಿಸಬೇಕೆಂದು ನನ್ನ ಪ್ರಾರ್ಥನೆ."

ಗಂಭೀರ ವಾಣಿಯಿಂದ ವಿಜಯವರ್ಮ ಈ ರೀತಿ ನುಡಿದ ಮಾತುಗಳನ್ನು ಕೇಳಿ ಕ್ಷಣಕಾಲ ದೇವಪುರದ ಜಮಿಾನುದಾರನು ತಬ್ಬಿಬ್ಬಾದ. ಒಂದುಸಾರಿ ದೀರ್ಘವಾಗಿ ನಿಟ್ಟುಸಿರಿಟ್ಟು ಖಂಡಿತ ಸ್ವರದಿಂದ—




ಅವರಿಬ್ಬರೂ ಅಡ್ಡದಾರಿ ಹಿಡಿದು ಅಡವಿ ಸೇರುವ ಹೊತ್ತಿಗೆ ಸೂರ್ಯಸ್ತಮವಾಯಿತು. ವಿಜಯ ಮತ್ತು ಅಣ್ಣಯ್ಯ ಹಸಿವಿನಿಂದ ತಳಮಳಿಸುತ್ತಿರುವರು. ಮೊದಲು ಊಟ, ನಂತರ ವಿಶ್ರಾಂತಿ ಹೊರತು ಬೇರೆ ಯಾವ ಕೆಲಸ ಮಾಡಬೇಕೆಂದೂ ಅವರಿಗೆ ಹೊಳೆಯಲಿಲ್ಲ.

"ನಾನು ನನ್ನ ಗುಪ್ತಗೃಹಕ್ಕೆ ಹೋಗುತ್ತೇನೆ. ನೀನು ಛತ್ರ ಸೇರಿಕೊಳ್ಳುವೆಯಾ?" ಎಂದು ವಿಜಯವರ್ಮನನ್ನು ಕುರಿತು ಅಣ್ಣಯ್ಯ ಕೇಳಿದ.

"ಅದೇ ಆಲೋಚಿಸುತ್ತಿದ್ದೇನೆ. ನಾವು ಕೈಹಾಕಿದ ಕೆಲಸ ಪೂರ್ತಿಯಾಗಲಿಲ್ಲ. ಸ್ವಲ್ಪಮಾತ್ರ ಮುಗಿಯಿತು. ಕರುಣಳನ್ನು ಕಾಪಾಡಿ ಜೊತೆಯಲ್ಲಿ ಕರೆತರದೆ ಹೋದರೂ ಆ ಬಲತ್ಕಾರದ ಮದುವೆಯಿಂದ ಆಕೆಯನ್ನು ಪಾರು ಮಾಡಿದೆವು. ಮುಂದಿನ ಕರ್ತವ್ಯ ನಾಳೆ ಯೋಚಿಸೋಣ. ನಾನು ಛತ್ರಕ್ಕೆ ಹೋಗುತ್ತೇನೆ" ಎಂದ ವಿಜಯವರ್ಮ.

ಅಣ್ಣಯ್ಯ ಅಡವಿಯ ನಡುವಿನಲ್ಲಿದ್ದ ತನ್ನ ರಹಸ್ಯಗೃಹಕ್ಕೆ ಹೋದ. ವಿಜಯವರ್ಮ ಬೇಗಬೇಗನೆ ನಡೆಯುತ್ತಾ ಛತ್ರದ ಕಡೆಗೆ ಮುಖಮಾಡಿ ಹೊರಟ.

ಆಗ ಛತ್ರದಿಂದ ಆತನನ್ನು ಹುಡುಕಿಕೊಂಡು ಇಬ್ಬರು ಸೇವಕರು ಬರುತ್ತಿರುವುದನ್ನು ನೋಡಿದ. ಅವರ ನಡೆಗೆಯರೀತಿಯನ್ನು ಕಂಡು ಏನೋ ಪ್ರಮಾದ ನಡೆದಿರಬೇಕೆಂದು

"ಸರಿ, ಇಬ್ಬರನ್ನೂ ಮುಕ್ತರನ್ನಾಗಿ ಮಾಡುವೆವು. ನೀವು ಮಾತ್ರ ಇನ್ನುಮೇಲೆ ನಮ್ಮ ಕಣ್ಣಿಗಾಗಲೀ, ನಮ್ಮ ಸೈನಿಕರ ದೃಷ್ಟಿಗಾಗಲೀ ಈ ಸುತ್ತಮುತ್ತಲಿನ ಪ್ರದೇಶದಲ್ಲಿ ಗೋಚರಿಸ ಬಾರದು. ಜೋಕೆ. ಹೊರಡಿ" ಎಂದು ಆಜ್ಞಾಪಿಸಿದ.

ವಿಜಯವರ್ಮ, ಅಣ್ಣಯ್ಯ ಜಮೀನುದಾರನಿಗೆ ನಮಸ್ಕಾರಮಾಡಿ, ಹೊರಕ್ಕೆ ಬಂದರು. ಇನ್ನು ಆ ಪ್ರಾಂತ್ಯದಿಂದ ಆದಷ್ಟು ಬೇಗ ಹೊರಬಿದ್ದು ತಮ್ಮ ನಿವಾಸ ಸೇರಿಕೊಳ್ಳುವುದು ಸುರಕ್ಷಿತವೆಂದು ತೋರಿತು. ಅದರಲ್ಲೂ ಭೀಮವರ್ಮನ ಸೈನಿಕರ ಕೈಗೆ ಸಿಕ್ಕದೆ ತಪ್ಪಿಸಿಕೊಂಡು ಹೋಗುವುದು ಮುಖ್ಯವಾಗಿತ್ತೆಂದು ಚೆನ್ನಾಗಿ ಅರಿತಿದ್ದರು.

ಭಾವಿಸಿ ವಿಜಯುವರ್ಮನು ಅವಸರವಸರವಾಗಿ ನಡೆದು ಅವರಿಗೆದುರಾದ.

ಅನುಚರರಿಬ್ಬರೂ ವಿಜಯವರ್ಮನನ್ನು ಸಮೀಪಿಸಿದರು. ಗೆಲುವಾಗಿದ್ದ ಅವರ ಮುಖ ಕಂಡು ಏನೋ ಶುಭಸಮಾಚಾರ ತಂದಿರುವರೆಂದು ವಿಜಯವರ್ಮನು ಅರಿತನು.

"ಏನು ಸಮಾಚಾರ?" ಎಂದ ವಿಜಯ ಆತುರದಿಂದ.

"ಬಹಳವಿದೆ. ಛತ್ರ ಸೇರಿದ ಕೂಡಲೇ ಅರಿಕೆ ಮಾಡುತ್ತೇವೆ. ಮೊದಲು ಈ ಕಾಗದವನ್ನು ನೋಡಿ" ಎಂದು ಅನುಚರರಲ್ಲಿ ಒಬ್ಬ ಒಂದು ಕಾಗದವನ್ನು ವಿಜಯನಿಗೆ ಕೊಟ್ಟನು.

ವಿಜಯವರ್ಮನು ಆ ಕಾಗದವನ್ನು ಎರಡು ಮೂರು ಬಾರಿ ಓದಿದ:

ಚಂದ್ರದುರ್ಗಾಧಿಪತಿ ಬೀಸಲ್ಪೂರು ರಾಜನಿಂದ ಕರೆ ಬಂದಕೂಡಲೇ ತನ್ನ ಅನುಚರರೊಂದಿಗೆ ಹೊರಟುಹೋದ. ಅಲ್ಲಿಗೆ ೨೦ ಮೈಲಿ ದೂರದಲ್ಲಿ ಬೀಸಲ್ಪೂರು—ಕೋಸಲ್ಪೂರುಗಳ ನಡವೆ ಭಾರಿ ಕಾಳಗವಾಗುವ ಸಂಭವವಿತ್ತಾದುದರಿಂದ ಆತನಿಗೆ ಆ ಕರೆ ಬಂದಿತ್ತು. ವಿಜಯವರ್ಮನು ಆದಷ್ಟು ಹುಷಾರಾಗಿ ನಡೆದುಕೊಳ್ಳಬೇಕೆಂದೂ, ಅನುಚರರೊಂದಿಗೆ ಯಾವ ನಿಮಿಷವಾದರೂ ಯುದ್ಧರಂಗಕ್ಕೆ ಬರಲು ಸಿದ್ಧವಾಗಿರಬೇಕೆಂದೂ ಅದರಲ್ಲಿ ಬರೆದಿತ್ತು.

ಈ ಕಾಗದದಿಂದ ವಿಜಯವರ್ಮನಿಗೆ ಅಪಾರ ಆನಂದವುಂಟಾಯಿತು. ಕ್ಷಿಪ್ರದಲ್ಲೇ




ಕೋಸಲ್ಪೂರು ರಾಜ್ಯವು ರಣರಂಗವಾಗುವುದೆಂದು ಆತನಿಗೆ ಸಂತೋಷವಾಯಿತು. ಈ ಏಟಿನಿಂದ ಭೀಮವರ್ಮನ ದೊಡ್ಡಸ್ತಿಕೆ ಎಲ್ಲಾ ಬಯಲಾಗುವುದೆಂದೂ, ಅಸಲು ಆತನು ಬಿಡಾರ ಮಾಡಿದ್ದ ನರ್ಮದಾನದಿಯ ತೀರದ ಭವನವೇ ಕದನ ಭೂಮಿಯಾಗುವುದೆಂದೂ, ವಿಜಯವರ್ಮ ಭಾವಿಸಿದ.

ಅನುಚರರೊಂದಿಗೆ ವಿಜಯವರ್ಮ ಛತ್ರವನ್ನು ಸೇರಿದ. ಅಲ್ಲಿ ಪರಿಸ್ಥಿತಿಯೆಲ್ಲಾ ಕೋಲಾಹಲಕರವಾಗಿತ್ತು. ಬೇಹುಗಾರರು ವಿವಿಧ ವಾರ್ತೆಗಳನ್ನು ತಂದರು. ಸಾವಿರಗಟ್ಟಲೆ ಸೈನ್ಯ ಅರಣ್ಯ ಮಾರ್ಗದಲ್ಲಿ ಬರುತ್ತಿರುವುದೆಂದು ಹೇಳಿದರು. ಎಲ್ಲರಿಗೂ ಏನೋಕುತೂಹಲ. "ಈ ಅಡವಿಯಲ್ಲಿ ಮರಗಿಡಗಳಿಗಿಂತ




ಅಲ್ಲಿ ಓಡಾಡುತ್ತಿರುವ ಸೈನ್ಯದ ಸಂಖ್ಯೆಯೇ ಅಪಾರವಾಗಿದೆ. ಕಣ್ಣಾರೆ ನಾನು ನೋಡಿದೆ" ಎಂದು ಒಬ್ಬ ಹೇಳಿದ.

ಅನುಚರರ ಮಾತುಗಳನ್ನು ಆಲಿಸುತ್ತಾ ವಿಜಯ ಊಟ ಮುಗಿಸಿದ. ಆಗ ರಾತ್ರಿ ಬಹಳ ಸಮಯವಾಗಿತ್ತು. ಸೈನಿಕರಲ್ಲಿ ಕೆಲವರು ನಿದ್ದೆ ಮಾಡುತ್ತಿದ್ದರು. ವಿಜಯವರ್ಮನಿಗೂ ಬಹಳ ಆಯಾಸವಾಗಿತ್ತು. ಇನ್ನು ಕೆಲವರನ್ನು ಸರದಿಪ್ರಕಾರ ಸುತ್ತ ಮುತ್ತಲು ಕಾವಲಿರುವಂತೆ ಏರ್ಪಾಟು ಮಾಡಿ ತಾನೂ ಮಲಗಿಕೊಂಡ ವಿಜಯವರ್ಮ.

ನಸು ಬೆಳಕಿರುವಾಗಲೇ ಆತನಿಗೆ ಎಚ್ಚರವಾಯಿತು. ಆಲಸ್ಯ ಮಾಡದೆ ಸೈನಿಕನ ಪೋಷಾಕು ಧರಿಸಿ ಸುತ್ತಮುತ್ತಲಿನ ಪರಿಸ್ಥಿತಿಯನ್ನು ಸ್ವತಃ ನೋಡ ಹೊರಟ ವಿಜಯವರ್ಮ. ಅಡವಿಪ್ರದೇಶದಲ್ಲಿ ಇನ್ನೂ ಕತ್ತಲಾವರಿಸಿತ್ತು. ಜಾಗರೂಕತೆಯಿಂದ ದಾರಿಮಾಡಿಕೊಂಡು ವಿಜಯವರ್ಮ ಗಿಡಗಳ ಮಧ್ಯೆ ನಡೆಯುತ್ತಿದ್ದ.

ಸ್ವಲ್ಪದೂರ ಹೋದನಂತರ ಆತನ ಕಿವಿಗಳಿಗೆ ಯಾವುದೋ ಭಾರಿ ಧ್ವನಿ ಕೇಳಿಸಿತು. ಕೂಡಲೇ ಒರೆಯಿಂದ ಕತ್ತಿಯನ್ನು ಸೆಳೆದು ಧ್ವನಿಬಂದ ದಿಕ್ಕಿನೆಡೆ ಓಡಿದ.

ಗುಬುರಾಗಿದ್ದಾ ಗಿಡಗಳನ್ನು ದಾಟಿ ವಿಶಾಲವಾದ ದಿಣ್ಣೆಯೊಂದರ ಸಮೀಪಕ್ಕೆ ಬಂದಾಗ ವಿಜಯವರ್ಮನು ಸ್ತಂಭಿತನಾದ.

ಒಬ್ಬ ವ್ಯಕ್ತಿಯನ್ನು ಐದಾರು ಜನ ಸೈನಿಕರು ಸುತ್ತು ಗಟ್ಟಿದ್ದರು. ಆ ವ್ಯಕ್ತಿ ಅವರ ಹೊಡೆತಗಳನ್ನು ತಪ್ಪಿಸಿಕೊಂಡು ಸಾಧ್ಯವಾದಾಗಲೆಲ್ಲಾ ಅವರನ್ನು ಗಾಯಗೊಳಿಸುತ್ತಿದ್ದ.

"ಬರುತ್ತಿರುವೆನು. ಭಯಪಡಬೇಡ. ನಿಲ್ಲು, ಧೈರ್ಯವಾಗಿ ಎದುರಿಸು" ಎಂದು ಕೂಗುತ್ತಾ ವಿಜಯವರ್ಮ ಆ ಸೈನಿಕರ ಹತ್ತಿರಕ್ಕೆ ಧಾವಿಸಿದ.

ಕಾದಾಟವಾಡುತ್ತಿರುವವರು ಯಾರೋ ಆತನಿಗೆ ತಿಳಿಯದು. ಆದರೆ ಒಬ್ಬನ ಮೇಲೆ ಐವರು ಕೈಮಾಡುವುದು ವಿಜಯವರ್ಮನಿಗೆ ಅಧರ್ಮವಾಗಿ ತೋರಿತು.

ನಿಸ್ಸಹಾಯಕನಾದರೂ ಧೈರ್ಯದಿಂದ ಅಷ್ಟುಮಂದಿ ಶತ್ರುಗಳಿಗೆ ಕತ್ತಿಯಿಂದ

ಜವಾಬು ಕೊಡುತ್ತಿದ್ದ ವೀರನು, ವಿಜಯವರ್ಮನ ಮಾತುಗಳಿಂದ ಮತ್ತಷ್ಟು ಹುಮ್ಮಸ್ಸುಗೊಂಡು ಒಬ್ಬೊಬ್ಬ ಸೈನಿಕನನ್ನೇ ಗಾಯಗೊಳಿಸುತ್ತಾ ಬಂದನು. ವಿಜಯವರ್ಮನೂ ಸಹ ಅಷ್ಟರಲ್ಲೇ ಸೈನಿಕರನ್ನು ಹಿಂದಿನಿಂದ ಎದುರಿಸಿದ.

ವಿಜಯವರ್ಮನು ಸಮೀಪಿಸುವ ವೇಳೆಗೆ ಒಬ್ಬ ಸೈನಿಕನು ಕೆಳಗೆಬಿದ್ದ. ಮತ್ತೊಬ್ಬ ಗಾಯಗೊಂಡು ನೋವಿನಿಂದ ನರಳುತ್ತಿದ್ದ. ವಿಜಯವರ್ಮನು ಬಂದಿರುವುದನ್ನು ನೋಡಿ ಉಳಿದ ಸೈನಿಕರು ಓಡಿದರು.

ಹಾಗೆ ಪಲಾಯನಮಾಡುತ್ತಿದ್ದ ಸೈನಿಕರಲ್ಲಿ ಒಬ್ಬನನ್ನು ವಿಜಯವರ್ಮನೂ, ಮತ್ತೊಬ್ಬನನ್ನು ಆ ವೀರನೂ ಬಲಿಹಾಕಿದರು. ಆತರುವಾಯ ಒಬ್ಬರನ್ನೊಬ್ಬರು ಆಗಲೇ ಗುರ್ತಿಸಿದಂತೆ ಎದುರುಬದುರಾಗಿ ಗಕ್ಕನೆ ನಿಂತುಬಿಟ್ಟರು.

"ಸಮಯಕ್ಕೆ ಸರಿಯಾಗಿ ಸಹಾಯ ಮಾಡಿದಿರಿ. ನೀವು ಯಾರು?" ಎಂದು ಆ ವೀರನು ವಿಜಯವರ್ಮನನ್ನು ಕೇಳಿದ. ವಿಜಯನು ಆತನ ಕಂಠಸ್ವರದ ಧೋರಣೆ ಮತ್ತು ಗಾಂಭೀರ್ಯವನ್ನು ಗ್ರಹಿಸಿ ವಿಸ್ಮಯಗೊಂಡ. ಆ ಕ್ಷಣವೇ ಆತನು ಸಾಮಾನ್ಯ ಸೈನಿಕನಲ್ಲವೆಂತಲೂ, ಸಾಕಷ್ಟು ಗಣ್ಯವ್ಯಕ್ತಿ ಎಂದೂ ವಿಜಯವರ್ಮನು ಅರಿತುಕೊಂಡ.

"ನಾನು ಬರುವುದು ತುಸ ತಡವಾಯಿತು. ಸಮಯಕ್ಕೆ ಸರಿಯಾಗಿ ನೆರವು ಕೊಡಲಿಲ್ಲ



ವೆಂದು ಪರಿತಪಿಸುತ್ತಿರುವೆನು... ನಾನು ಬಾರದಿದ್ದರೂ ಆ ಸೈನಿಕರನ್ನೆಲ್ಲಾ ನೀವು ಸೋಲಿಸುತ್ತಿದ್ದಿರಿ" ಎಂದ ವಿಜಯವರ್ಮ.

ಆ ಮಾತುಗಳಿಗೆ ಉತ್ತರ ಕೊಡಬೇಕೆಂದಿರುವಷ್ಟರಲ್ಲಿ ಕುದುರೆಗಳ ಸಪ್ಪಳ ಕೇಳಿಸಿತು. ಸ್ವಲ್ಪ ಹೊತ್ತಿಗೆಲ್ಲಾ ನಾಲ್ಕು ಐದುನೂರು ಶೂರರು ಅಲ್ಲಿಗೆ ಬಂದರು. ಅವರ ದಳಪತಿ ಕುದುರೆಯಿಂದ ತಟಕ್ಕನೆ ಇಳಿದು ಆ ವೀರನನ್ನು ಸಮೀಪಿಸಿ, "ಪ್ರಭುಗಳ ಅಪ್ಪಣೆ ಪ್ರಕಾರ ನನ್ನ ದಳದೊಂದಿಗೆ ಬಂದಿರುತ್ತೇನೆ. ಚಂದ್ರದುರ್ಗಾಧಿಪತಿ ಸಾವಿರ ಸೈನಿಕರೊಂದಿಗೆ ಸಾಯಂಕಾಲದ ಸಮಯಕ್ಕೆ ಬರುತ್ತಾರೆ" ಎಂದು ಹೇಳಿದ.

"ಅಗೋ, ಆ ಗಿಡಗಳ ಹಿಂದೆ ನಮ್ಮ

ಡೇರೆಗಳಿವೆ. ಮೊದಲು ಏನು ಮಾಡಬೇಕೋ ಅದನ್ನು ನಿರ್ಣಯಿಸುವೆನು. ಸೈನಿಕರೆಲ್ಲರೂ ಕುದುರೆಗಳಿಂದ ಇಳಿದು ಇಲ್ಲೇ ಇರುವಂತೆ ಆಜ್ಞಾಪಿಸಿ, ನೀನೂ ಈತನೂ ಆ ಗುಡಾರಗಳ ಬಳಿ ಬನ್ನಿ" ಎಂದು ಹೇಳಿ ಆ ವೀರನು ಹೊರಟು ಹೋಗಿಬಿಟ್ಟನು.

ವಿಜಯವರ್ಮನಿಗೆ ಇದು ಕೌತುಕವನ್ನುಂಟುಮಾಡಿತು. ಸ್ವಲ್ಪ ಹೊತ್ತಿಗೆಲ್ಲಾ ಅಶ್ವದಳದ ನಾಯಕನು ತನ್ನ ಸವಾರರಿಗೆ ಸೂಕ್ತಸೂಚನೆಗಳನ್ನು ಕೊಟ್ಟು ವಿಜಯನ ಹತ್ತಿರ ಬಂದ. ಕುತೂಹಲನಾಗಿದ್ದ ವಿಜಯವರ್ಮನು ಆ ವೀರನು ಯಾರೆಂದು ಆ ದಳನಾಯಕನನ್ನು ಕೇಳಿದ.

"ಯಾರೋ ಗೊತ್ತಿಲ್ಲವೇ? ಅವರೇ ಬಿಸಲ್ಪೂರು ಪ್ರಭು!" ಎಂದ ಆ ದಳಪತಿ.

ವಿಜಯವರ್ಮನ ಆಶ್ಚರ್ಯಕ್ಕೆ ಮೇರೆಯೇ ಇಲ್ಲ. ಅನಿರೀಕ್ಷಿತವಾಗಿ ತಾನು ಬಿಸಲ್ಪೂರು ಪ್ರಭುವಿಗೆ ಸಹಾಯ ಮಾಡುವ ಸಂದರ್ಭವೊದಗಿದುದಕ್ಕೆ ತನ್ನನ್ನು ತಾನೇ ಅಭಿನಂದಿಸಿಕೊಂಡ. ಬಹಳ ಸಂತಸವಾಯಿತು ಅವನಿಗೆ.

ಭೀಮವರ್ಮ ಮತ್ತು ಸೋಮಶರ್ಮರ ರಹಸ್ಯ ತಿಳಿಯುವ ಸಮಯ ಒದಗಿ ಬಂದಿತೆಂದು ಉತ್ಸಾಹಗೊಂಡ ವಿಜಯವರ್ಮನು ಆ ದಳಪತಿಯೊಂದಿಗೆ ಬಿಸಲ್ಪೂರು ಪ್ರಭುಗಳು ತಂಗಿದ್ದ ಬಿಡಾರದ ಕಡೆ ಹೊರಟ.

ಬೀಸಲ್ಪೂರು ಪ್ರಭು ವಿಜಯವರ್ಮನನ್ನು ಗೌರವಾದರಗಳಿಂದ ತನ್ನ ಗುಡಾರದೊಳಕ್ಕೆ ಆಹ್ವಾನಿಸಿ, ಅತಿಥಿ ಮರ್ಯಾದೆಯನ್ನು ಸಲ್ಲಿಸಿ ತದನಂತರ ಸಂಭಾಷಣೆಗೆ ಪ್ರಾರಂಭಿಸಿದ.

"ನಾನು ಯಾರೆಂಬುದು ನಿಮಗೆ ಈಗಾಗಲೇ ತಿಳಿದಿರಬಹುದು. ಇನ್ನು ನಿಮ್ಮ ವಿಷಯ ನನಗೆ ತಿಳಿಯಹೇಳಿ" ಎಂದು ಕೇಳಿದ.

"ನನ್ನ ಹೆಸರು ವಿಜಯವರ್ಮ" ಎಂದು ಅಷ್ಟೇ ಹೇಳಿದ. ಅಷ್ಟಲ್ಲದೆ ತಾನು ಹೇಳಿಕೊಳ್ಳಬೇಕಾದುದೇನೂ ಇರಲಿಲ್ಲ. ಏನು ತಾನೇ ಇದೆ? ತಾನೀವರೆವಿಗೂ ಯಾವ ಮಹಾಯುದ್ಧದಲ್ಲೂ ಭಾಗ ವಹಿಸಿಲ್ಲ. ಅದ್ಭುತ ಸಾಹಸ ಕೃತ್ಯಗಳನ್ನೂ ಮಾಡಿಲ್ಲ. ಹೆಚ್ಚಿಗೆ ಹೇಳಿಕೊಳ್ಳಲಿಕ್ಕೇನಿದೆ?

[ಮುಂದಿನ ಸಂಚಿಕೆಯಲ್ಲಿ ಮುಕ್ತಾಯ]



# ನಾಲ್ಕು ಮೂಲೆಗಳ ನಡಿಗೆ

ಒಂದು ದೇಶದಲ್ಲಿ ಬಸ್ಸಿನಲ್ಲಿ ಮೂರು ಬಗೆಯ ತರಗತಿಗಳಿದ್ದುವು. ಒಂದು ದಿನ ದಾರಿಯಲ್ಲಿ ಬಸ್ಸು ಕೆಟ್ಟುಹೋಯಿತು. ಆಗ ಕಂಡಕ್ಟರ್ ಈ ರೀತಿ ಹೇಳಿದ: "ಮೊದಲನೇ ತರಗತಿಯ ಪ್ರಯಾಣಿಕರು ಇರುವಲ್ಲಿಯೇ ಇರಿ. ಎರಡನೇ ತರಗತಿಯ ಪ್ರಯಾಣಿಕರು ಕೆಳಗಿಳಿದು ಬಸ್ಸಿನ ಹಿಂದೆಯೇ ನಡೆಯಿರಿ. ಮೂರನೇ ವರ್ಗದ ಪ್ರಯಾಣಿಕರು ಕೆಳಗಿಳಿದು ಬಸ್ಸನ್ನು ತಳ್ಳಿ."

—◆—

ಇಬ್ಬರು ಆಪ್ತಸ್ನೇಹಿತರಿದ್ದರು. ಅವರಲ್ಲಿ ಒಂದು ಬಾರಿ ಒಂದು ಸಣ್ಣ ಜಗಳವಾಯಿತು. ಅದು ದಿನೇ ದಿನೇ ವೃದ್ಧಿಯಾಗಿ ಕೊನೆಗೆ ಅವರಿಬ್ಬರ ನಡುವೆ ಮಾತುಕತೆ ನಿಂತುಹೋಯಿತು. ಅವರಿಬ್ಬರಿಗೂ ಬೇಕಾದ ಗೆಳೆಯರು ಕೆಲವರು ಆವರಿಬ್ಬರಿಗೆ ರಾಜಿಮಾಡಿಸಿದರು. ಈ ವಿಷಯ ಕೇಳಿ ಎಲ್ಲರೂ ಸಂತೋಷಪಟ್ಟರು. ಹೀಗೆ ಇರಲು ಒಂದು ದಿನ ಒಬ್ಬ ಮಿತ್ರನು ಅವರಲ್ಲೊಬ್ಬನನ್ನು ಅಭಿನಂದಿಸಲು ಹೋದರೆ ಆತನು ಹೀಗೆಂದ: "ಮೊದಲು ನಾವಿಬ್ಬರೂ ಒಂದೇ ದಾರದಂತೆ ಇದ್ದೆವು. ಹಾಯಾಗಿತ್ತು. ಈಗ ನೀವೆಲ್ಲರೂ ಸೇರಿ ಆತನ ದಾರದ ತುಂಡನ್ನೂ ನನ್ನ ದಾರದ ತುಂಡನ್ನೂ ಸೇರಿಸಿ ಗಂಟು ಹಾಕಿದಿರಿ. ಆಗಾಗ ಈ ಗಂಟು ಅಡ್ಡಿ ಬರುತ್ತಿರುವುದರಿಂದ ಹಿಂದಿದ್ದಷ್ಟು ನೆಮ್ಮದಿ ಈಗಿಲ್ಲವಾಗಿದೆ.

—◆—

ಒಂದು ಗ್ರಾಮದಲ್ಲಿ ಸೋಮು ಎಂಬ ಒಬ್ಬ ಭಯಂಕರ ಕಳ್ಳ ಇದ್ದ. ಅವನಿಗೆ ಭೂತಕನ್ನಡಿಯನ್ನು ನೋಡಬೇಕೆಂದು ಬಹಳ ಕುತೂಹಲ. ಅದರ ವಿಷಯ ಅವನು ತುಂಬಾ ಕೇಳಿದ್ದನೇ ಹೊರತು ನೋಡಿರಲಿಲ್ಲ. ಆದರಿಂದ ನೋಡಿದರೆ ಸಣ್ಣ ವಸ್ತುಗಳು ದೊಡ್ಡದಾಗಿ ಕಾಣುವುವೆಂದೂ, ಕಾಣದ ವಸ್ತುಗಳನ್ನು ನೋಡಬಹುದೆಂದೂ ಕೇಳಿದ್ದ. ಒಂದು ಕಾರ್ಯಾಲಯದೊಳಗೆ ಅಂತಹ ಭೂತಕನ್ನಡಿಯಿದೆಯೆಂದೂ, ಅದನ್ನು ಹೇಗಾದರೂ ಕದ್ದುಕೊಳ್ಳ ಬೇಕೆಂದೂ ನೆನೆಸಿ ಸೋಮು ಒಂದುದಿನ ಆ ಕಾರ್ಯಾಲಯದೊಳಗೆ ಹೊಕ್ಕ. ಅಲ್ಲಿದ್ದೊಂದು ದೊಡ್ಡ ನಿಲುವು ಗನ್ನಡಿಯ ಮುಂದೆ ನಿಂತನೋ ಇಲ್ಲವೋ—"ಅಯ್ಯೋ! ಭೂತಕನ್ನಡಿ!" ಎಂದು ಕೂಗಿ ಹೆದರಿಬಿದ್ದ. ಮತ್ತೇನಿದೇ? ಕಳ್ಳ ಸಿಕ್ಕಿಬಿದ್ದ ಅಷ್ಟೇ!

# ಕೊಡದೊಳಗಿನ ಕಳ್ಳ!

ಕೇಳಿರಿ ನಮ್ಮಾ ಬಾಲಕ ಮದನ,
ಮಂದಬುದ್ಧಿ ಸುಂದರ ಹುಡುಗ!
ಒಂದಿನ ತಾಯಿ ನಿದ್ದೆಯಲಿರಲು
ಬಂದನೊಡನೆ ಕಡಿಯುಲು ತುಡುಗ.
ಕಲ್ಲುಸಕ್ಕರೆಯ ಡಬ್ಬಿಯ ತೆರೆದು
ಕಲ್ಲುಸಕ್ಕರೆಯ ತುಂಡೊಂದು,
ಕದ್ದುಕೊಂಡು ತೋಟದ ಕಡೆಗೋಡಿ
ಯಾರೂ ಕಾಣದೆ ತಿನಲೆಂದು.



ನೋಡಲು ಅಲ್ಲಿ ಆತನ ತಂದೆ
ಶಿವಲಾಲನು ಕರೆದನು ಮಗನ
ಕಲ್ಲು ಸಕ್ಕರೆಯ ಅಡಗಿಸಲೆಂದು
ಅತ್ತಯಿತ್ತ ನೋಡಿದ ಮದನ.
ತೋಟದ ಮಾಲಿ ಗಿಡಮರಗಳಿಗೆ
ನೀರು ಹೊಯಿದು ಆ ಕೊಡದಲ್ಲಿ
ನೀರನು ತುಂಬಿ ಒಂದೆಡೆಯಿಟ್ಟು
ಹೋಗಿದ್ದನು, ಯಾರಿಲ್ಲಲ್ಲಿ.
ಮದನನು ಆ ನೀರ್ಗೊಡವ ಪರೀಕ್ಷಿಸಿ
ಸರಿಯಾವೆಡೆಯಿದು ಎಂದರಿದು,
ಕಲ್ಲುಸಕ್ಕರೆಯ ನದರೊಳಗಿಟ್ಟು
ತಂದೆಯ ಬಳಿ ಬಂದನು ಸರಿದು.
ತಂದೆ ಮಗಂದಿರು ಒಟ್ಟಿಗೆ ಸೇರಿ
ತೋಟವನೆಲ್ಲಾ ತಿರುಗುತ್ತ,
ತೋಟದ ವೈಭವ ಹಾಗೆ ಹೀಗೆಂದು
ಮಗನಿಗಾ ತಂದೆ ತೋರಿಸುತ,

ಸಂಜೆಗೆ ಮನೆಗೆ ಹೊರಡಲು ಮದನ
‘ಬರುವೆನೆ’ಂದು ಆಕಡೆ ಸರಿದ,
ಆ ಕೊಡದಲಿ ಕಲ್ಸಕ್ಕರೆ ಕಾಣದೆ
ಕೈಹಾಕಿ ತಡವಿ ಬೆರಗಾದ!
ಮತ್ತೂ ನೋಡಲು ಕೊಡದಲಿ ಅಡಗಿದ
ಹುಡುಗನ ಮುಖವನು ಕಾಣುತಲೇ,
‘ಕಳ್ಳನಯ್ಯೋ! ಕಲ್ಸಕ್ಕರೆ ತಿಂದಾ!’
ಎಂದಳುವಾ ದನಿ ಕೇಳುತಲೇ,
ಬಂದು ನೋಡಿ, ಮಗ ಹೇಳಿದುದೆಲ್ಲಾ
ಕೇಳಿ, ಉರಿದೆದ್ದ ಶಿವಲಾಲ!
‘ಕೊಡದಲಿ ಅಡಗಿದ ಕಳ್ಳನ ಹಿಡಿದು
ಬಡಿವೆ ನೋಡೆ’ಂದ ಶಿವಲಾಲ!
ಕೋಪದಿ ಅವನೂ ಕೊಡದಲಿ ನೋಡಲು
ದೊಡ್ಡ ಕಳ್ಳನೇ ಕಾಣಿಸಿದ.
‘ಎಲವೊ ನೀನೆ! ಬಲು ಹಿರಿಯುವನಾಗಿ
ಇಂಥ ಕೆಲಸವೇ! ಛೀ!’ ಯೆಂದ.
‘ಬಾಯಿಬಿಡದೆ ಅಡಗಿಯೆ ಎಕ್ಕಳಿಸುವ

ಭಡವ! ಭಂಡನಿವ! ಕೆಡು ಖೂಳ!
ಹಂ’ನೊಂದೊದ್ದನು ಪುಡಿಪುಡಿಯಾ ಕೊಡ
ಬೆಬ್ಬಡೆದು ನಿಂತ ಶಿವಲಾಲ!



“ರಂಗ”

## ಚುಟುಕಗಳು

ತಿನ್ನಲು ಬೇಕು ಹಣ್ಣು,
ಆಡಲು ಬೇಕು ಚೆಂಡು,
ಊಟಕೆ ಬೇಕು ಹಾಲು,
ಓದಲು ಬೇಕು ಪುಸ್ತಕ.

ಇಳೆಯೊಳುಂಟು ಹೊಳೆ
ಹೊಳೆಗೆ ಬೇಕು ಮಳೆ
ಮಳೆ ಬಂದರೆ ಬೆಳೆ
ಬಿಸಿಲು ಮಳೆ ಇಲ್ಲದಿಳೆ–
ನಾಶವೆಲ್ಲಾ ಜರ್ನಾಳೇ!

ಎಸ್. ವೆಂಕಟೇಶಶೆಟ್ಟಿ

ಮದುವೆ ಮನೆಯ ಊಟ
ಭಕ್ಷಾಭೋಜ್ಯ ಭರಾಟ
ಒಟ್ಟೊ ಹೊಟ್ಟೆ ಒತ್ತಿ ತಿಂದು
ತಿಂಗಳುಗಟ್ಲೇ ಪೇಚಾಟ!

ಎಂ. ಆರ್. ಹನುಮಂತರಾವ್

ರಾಮು ತುಂಬ ತುಂಟ
ಪೋಲಿಗಳಿಗೆ ನೆಂಟ
ಪರರ ಬೇಲಿ ಹಾರಿಹಾರಿ
ರಾಮು ಆದ ಕುಂಟ.

ಕಣ್ಣಿಗಿಂಪು ಒಳ್ಳೆ ಕಂಪು
ನೋಡು ನಮ್ಮ ತೋಟವು
ಏನು ಚೆನ್ನೆ ದುಂಡು ಮೊಲ್ಲೆ
ಹೂವು ಬಿಟ್ಟ ನೋಟವು.

ಹಾಡಿತೊಂದು ಗಿಣಿ
ಅದನು ನೋಡಿ ಮಣಿ
ಲಾಗ ಹಾಕಿ ತಾಳ ಹಾಕಿ
ಹೇಳುತ್ತಿದ್ದ ಕಣಿ

ವಿ. ಕೆ. ಶ್ರೀನಿವಾಸಯ್ಯ.

## ನಗೆಹನಿ

ಗಂಡ:– ಮೊನ್ನೆ ಜ್ಞಾಪಕ ಶಕ್ತಿಯ ಸ್ಪರ್ಧೆಯಲ್ಲಿ ನನಗೆರಡು ಬಹುಮಾನ ಬಂತಲ್ಲಾ? ಅದನ್ನು ನಾನು ಯಾವ ಪೆಟ್ಟಿಗೆಯಲ್ಲಿಟ್ಟಿದ್ದೇನೆಂತ ನಿನಗೆ ನೆನಪಿದೆಯೊ?...

* * *

ಟೀಚರ್:–ಕಮಲೂ, ಸಾಗರಗಳಲ್ಲಿ ದೊಡ್ಡ ಸಾಗರ ಯಾವುದು?

ಕಮಲು:–ಸಂಸಾರ ಸಾಗರಾಂತ ನಮ್ಮಪ್ಪ ಹೇಳ್ತಾರೆ ಸಾರ್.

* * *

ಡಾಕ್ಟರ್:–ನಿನ್ನೆ ಕಣ್ಣೇಬಿಡಿಸಲಿಕ್ಕಾಗುವುದಿಲ್ಲವೆಂದಿರಲ್ಲ? ನಾನು ಔಷಧಿ ಹಾಕಿದ ಮೇಲೆ ಈಗ ಹೇಗಿದೆ?

ರೋಗಿ:–ಕಣ್ ಕಣ್ ಬಿಡ್ತಾ ಇದ್ದೀನಲ್ಲ ಸಾರ್?!

ಎಂ. ಹೆಚ್. ಶ್ರೀಕಂಠಯ್ಯ,

* * *

ಮಾಸ್ತರು:–ಲೋ, ರಾಮು, ನನ್ನ ಕುರ್ಚಿ ಮೇಲೆ ಕುಳಿತಿದ್ದ್ಯಾ? ಸತ್ಯಹೇಳು ಕೊಂದು ಹಾಕೇನು.

ರಾಮು:–ಹೌ–ದು–ಸಾ–ರ್.

ಮಾಸ್ತರು:–ಸರಿ. ಸತ್ಯ ಹೇಳಿದ್ದರಿಂದ ಬದುಕಿದೀ!

ಎಚ್. ಎಂ. ರಾಮಣ್ಣಶೆಟ್ಟಿ

# ಸೂರಪ್ಪನ ದೊಡ್ಡಸ್ತಿಕೆ

SANKAR..

**ಶೆ**ಟ್ಟಿಹಳ್ಳಿ ಸೂರಪ್ಪನಲ್ಲಿ ವಿಚಿತ್ರವಾದ ಒಂದು ಗುಣವಿತ್ತು. ಅದೇನೆಂದರೆ,

ಯಾವುದಕ್ಕಾದರೂ ಸರಿಯೇ, ಮಾತಿಗೆ ಮೊದಲು "ಪಂದ್ಯ" ಎನ್ನುವನು. ಪೇಟೆಯಲ್ಲಿ ಹೋಗುತ್ತಿರುವಾಗ ಯಾರಾದರೂ ಎದುರಾಗಿ "ಏನು ಸೂರಪ್ಪತಾತ! ಮೋಡ ಕವಿದಿದೆ. ಮಳೆ ಬರುವಂತಿದೆ!" ಎಂದರೆ, ತತ್‌ಕ್ಷಣ "ಪಂದ್ಯ! ಮಳೆ ಬರೋಲ್ಲ" ಎಂದು ಖಚಿತವಾಗಿ ನುಡಿಯುವನು. ಪ್ರತಿಯೊಂದಕ್ಕೂ ಇದೇ ರೀತಿ 'ಪಂದ್ಯ, ಪಂದ್ಯ' ಎನ್ನುವ ಸೂರಪ್ಪನಿಗೆ ಈ ಮಾತು ಪ್ರಮಾದವಾಗಿ ಪರಿಣಮಿಸುವುದು.

ಒಂದಾವರ್ತಿ ಶುಭಾಶುಭ ಕಾರ್ಯಗಳಲ್ಲಿ ಮಂತ್ರ ಹೇಳುವ ರಾಮಭಟ್ಟರಿಗೆ ಖಾಯಿಲೆ ಬಂತು. ಆತನನ್ನು ನೋಡಲು ಬಂದ ವೈದ್ಯರೆಲ್ಲರೂ ಗಡಿಬಿಡಿ ಮಾಡುತ್ತಿದ್ದರು. ಸ್ನೇಹಿತರು, ಬಂಧುಗಳು ಗುಂಪು ಸೇರಿದರು. ಮನೆಯಲ್ಲಿ ಕೋಲಾಹಲವೋ ಕೋಲಾಹಲ. ಆ ಸಮಯಕ್ಕೆ ಸರಿಯಾಗಿ ಸೂರಪ್ಪ ಅದೇ ದಾರಿಯಲ್ಲಿ ಹೊರಟಿದ್ದ. ಭಟ್ಟರ ಮನೆ ಕೋಲಾಹಲ ಕಂಡು "ಏನು ಈ ಗದ್ದಲ?" ಎಂದು ಒಬ್ಬಾತನನ್ನು ವಿಚಾರಿಸಿದ.

"ಶಾಸ್ತ್ರಿಗಳಿಗೆ ಹೇಳತೀರದಷ್ಟು ಖಾಯಿಲೆ ಮಹಾ ವೈದ್ಯರೆಲ್ಲಾ ಬಂದಿರುವರು. ಇನ್ನು ಪರವಾಯಿಲ್ಲ. ಉಳಿದುಕೊಳ್ಳುತ್ತಾರೆ" ಎಂದು ಆತಹೇಳಿದ.

ಕೂಡಲೇ ಸೂರಪ್ಪ "ಪಂದ್ಯ" ಎಂದ. "ಶಾಸ್ತ್ರಿ ಉಳಿಯುವುದಿಲ್ಲ. ಬೇಕಾದರೆ ಹತ್ತು ರೂಪಾಯಿ ಪಂದ್ಯ ಕಟ್ಟಲು ಸೈ" ಎಂದು ಜೋಬಿಗೆ ಕೈಹಾಕಿ ರೂಪಾಯಿ ಎತ್ತಿ ಠಣ್ ಎನ್ನಿಸಿದ ಸೂರಪ್ಪತಾತ.

ಸೂರಪ್ಪನ ನಡತೆ ಬಲ್ಲವನಾದುದರಿಂದ ಆ ಆಸಾಮಿ ಕೋಪಿಸಿಕೊಳ್ಳಲಿಲ್ಲ. ಒಳ್ಳೆಯ ಮಾತಿನಲ್ಲೇ ಸೂರಪ್ಪನನ್ನು ಎಚ್ಚರಿಸಿ ಹೊರಟು ಹೋದ. ತನ್ನ ಬುದ್ಧಿಶಕ್ತಿಗೆ ಹೆಮ್ಮೆ ಪಡುತ್ತಾ "ಹುಂ" ಎಂದು ಸೂರಪ್ಪತಾತ ನಾಲ್ಕು ಹೆಜ್ಜೆ ಮುಂದಿಟ್ಟಿರಬಹುದು; ಆಗ ಇದಿರಿನಲ್ಲಿ ಒಬ್ಬದೊಡ್ಡಮನುಷ್ಯ ಕಾಣಿಸಿದ.

ಎ. ಗುಂಡಪ್ಪ, ಹೊಸಪೇಟೆ




"ಏನು ಸೂರಪ್ಪನವರೇ, ನಮ್ಮ ಭಟ್ಟರಿಗೆ ಪ್ರಾಣಕ್ಕೆ ಮೋಸಾಂತ ಅಂತಾರಲ್ಲ. ಉಳಿಯುಲಾರರು ಎಂದು ಹೇಳುತ್ತಿದ್ದಾರೆ. ನಿಮಗೇನಾದರೂ ಗೊತ್ತೇ?" ಎಂದು ಕೇಳಿದ.

"ಪಂದ್ಯ!" ಎಂದ ಸೂರಪ್ಪ ಸ್ವಲ್ಪವೂ ತಡೆನೂಡದೆ "ಭಟ್ಟರು ನಿಸ್ಸಂದೇಹವಾಗಿ ಬದುಕುತ್ತಾರೆ. ಬೇಕಾದರೆ ಹತ್ತು ರೂಪಾಯಿ ಪಂದ್ಯ ಕಟ್ಟುತ್ತೇನೆ. ಸೈ" ಎಂದು ಸರಕ್ಕನೆ ಕಿಸೆಯೊಳಗೆ ಕೈಹಾಕಿ ರೂಪಾಯಿಗಳನ್ನು ಹೊರಕ್ಕೆ ತೆಗೆದ. ಆ ದೊಡ್ಡಮನುಷ್ಯ ಮಾತನಾಡಲಿಲ್ಲ; ಕಾರಣವೇನೆಂದರೆ ಆತನೂ ಸಹ ಸೂರಪ್ಪನ ಗುಣವನ್ನು ಅರಿತಿದ್ದ! ಈ ಬಗೆಯಾಗಿ ಸೂರಪ್ಪನ ವಿಚಿತ್ರ ನಡವಳಿಕೆ ಮುಂದುವರಿದಿತ್ತು, ಆ ಕಾಲದಲ್ಲಿ.

ಪ್ರತಿಯೊಂದಕ್ಕೂ ಅತಿತ್ವರೆಯಾಗಿ ಪಂದ್ಯ ಕಟ್ಟುವ ಸೂರಪ್ಪನಿಗೆ ಒಂದಾವರ್ತಿ ಒಬ್ಬ ಬೃಹಸ್ಪತಿ ಸಿಕ್ಕಿದ. ಆ ಸಮಯದಲ್ಲಿ ಸೂರಪ್ಪನಿಗೆ ಒಂದು ಆಲೋಚನೆ ಹೊಳೆಯಿತು. ಅದೇನೆಂದರೆ:

"ಟಗರು, ಕೋಳಿ ಪಂದ್ಯಗಳಂತೆ ಕಪ್ಪೆಗಳ ಪಂದ್ಯ ನಡೆಸಬಾರದೇಕೇ?" ಎಂದು. ಈ ಯೋಚನೆ ಬಂದಕೂಡಲೇ ಊರ ಹೊರಗಿದ್ದ ಕೆರೆಯ ಬಳಿಗೆ ಹೋಗಿ ಒಂದು ದೊಡ್ಡ ಕಪ್ಪೆಯನ್ನು ಹಿಡಿದು ತಂದ ಸೂರಪ್ಪ.

ಸರಿ, ಅದನ್ನು ಒಂದು ಮರದ ಪೆಟ್ಟಿಗೆಯಲ್ಲಿರಿಸಿ, ಅದಕ್ಕೆ ಕುಪ್ಪಳಿಸುವ ಚಾತುರ್ಯವನ್ನು ಕಲಿಸಿದ. ಒಂದು ಗಜದ ಅಂತರವಿರುವ ಎರಡು ಗೆರೆಗಳನ್ನು ಎಳೆದು, ಒಂದು ಗೆರೆಯ ಮೇಲೆ ಆ ಕಪ್ಪೆಯನ್ನಿರಿಸಿ,

"ನೆಗೆಯಪ್ಪಾ, ತಮ್ಮಾ ನೆಗೆ" ಎಂದು ಅದರ ಬೆನ್ನಿನಮೇಲೆ ಬೆರಳಾಡಿಸುವನು. ಹೀಗೆ ಒಂದು ಸಲಕ್ಕೆ ನಾಲ್ಕೈದು ಗಜ ಕುಪ್ಪಳಿಸುವುದನ್ನು ಕಲಿಸಿದ ಆ ಕಪ್ಪೆಗೆ. ಅನಂತರ ಆ ಕಪ್ಪೆಯನ್ನು ಮರದ ಪೆಟ್ಟಿಗೆಯಲ್ಲಿಟ್ಟು ಊರೂರು ತಿರುಗುತ್ತಾ "ಬಿರುದು ಪಡೆದ ಕಪ್ಪೆ, ನಮ್ಮಸೀಮೆ ಕಪ್ಪೆ. ಕುಪ್ಪಳಿಸುವುದರಲ್ಲಿ ಇದನ್ನು ಸೋಲಿಸಬಲ್ಲ ಕಪ್ಪೆ ಯಾರಲ್ಲಾದರೂ ಇದ್ದರೆ ಬನ್ನಿರಯ್ಯಾ, ಬನ್ನಿ! ಹತ್ತು ರೂಪಾಯಿ ಪಂದ್ಯ" ಎಂದು ಹೇಳುತ್ತಾ ಹೋಗುವನು. ಇದನ್ನು ಕೇಳಿದವರು "ಕಪ್ಪೆಗಳ ಪಂದ್ಯವೆಂತಹದು?

ನಾವೆಲ್ಲೂ ಕೇಳಿಲ್ಲ, ನೋಡಿಲ್ಲ'' ಎಂದುನ್ನುತ್ತಾ ಕಿಲ ಕಿಲ ನಗುವರು ಹೊಟ್ಟೆ ತುಂಬಾ.

ಅಷ್ಟರಲ್ಲಿ ಶಿವರಾತ್ರಿ ಬಂತು. ಒಂದು ಗ್ರಾಮದಲ್ಲಿ ರಥೋತ್ಸವ. 'ಅಲ್ಲಿ ಕುಂಜದ ಕಾಳಗ, ಟಗರಿನ ಪಂದ್ಯಾಟ ಮೊದಲಾದುವು ನಡೆಯುವುದು ಸ್ವಾಭಾವಿಕ.

'ನನ್ನೊಂದಿಗೆ ಕಪ್ಪೆ ಪಂದ್ಯಕ್ಕೆ ನಿಲ್ಲುವವನು ಯಾವನಾದರೂ ಇರಲಾರನೆ?' ಎಂದು ಸೂರಪ್ಪ ಅಲ್ಲಿಗೆ ಹೋದ.

ಆ ಪರಿಷೆಯಲ್ಲೆಲ್ಲಾ ತಿರುಗಾಡುತ್ತಾ ಸೂರಪ್ಪ ಸಿಕ್ಕಿದವರಿಗೆಲ್ಲಾ ತನ್ನ ಕಪ್ಪೆಯ ಹಿರಿಮೆ ವರ್ಣಿಸುತ್ತಿದ್ದ.

ಏನೋ ಸೂರಪ್ಪನ ದುರದೃಷ್ಟ ಇರಬೇಕು. ಅವನೊಡನೆ ಪಂದ್ಯಕ್ಕೆ ಸಿದ್ಧನಾದ ಒಬ್ಬ ಆಷಾಡಭೂತಿ!

"ಪಂದ್ಯ ಎಂದರೆ ಪಂದ್ಯ. ಹತ್ತು ರೂಪಾಯಿ" ಎಂದು ಇಬ್ಬರೂ ಒಪ್ಪಂದಕ್ಕೆ ಬಂದರು. ಪಂದ್ಯಕ್ಕೆ ನಿಂತರು.

ಆದರೆ ಪಂದ್ಯಕ್ಕೆ ಸಿದ್ಧನಾದವನ ಹತ್ತಿರ ಕಪ್ಪೆ ಇರಲಿಲ್ಲ. ಅದಕ್ಕಾಗಿ ಅವನು ಯೋಚನೆ ಮಾಡುವಾಗ ಉತ್ಸಾಹಶಾಲಿಯಾದ ಸೂರಪ್ಪ ತಾನೇ ಹೋಗಿ ಆ ಸುತ್ತು ಮುತ್ತು ಹುಡುಕಿ ಪಂದ್ಯಕ್ಕೆ ಸರಿಯಾದ ಕಪ್ಪೆಯೊಂದನ್ನು ತರಲು ಒಪ್ಪಿಕೊಂಡ.

ತನ್ನ ಬಿರುದುಪಡೆದ ಕಪ್ಪೆಯನ್ನು ಆ ವ್ಯಕ್ತಿಯ ಹತ್ತಿರವಿರಿಸಿ, ಅವನಿಗಾಗಿ ಹೊಸ ಕಪ್ಪೆ ತರಲು ತಾನು ಹೊರಟ.




ಬಹಳ ಕಷ್ಟಪಟ್ಟು ಸತ್ತುಸುಣ್ಣವಾಗಿ ಒಂದು ಕಪ್ಪೆಯನ್ನು ಹೇಗೋ ಹಿಡಿದು ತಂದ ಸೂರಪ್ಪ.

ಗೆರೆಹಾಕಿ ಎರಡು ಕಪ್ಪೆಗಳನ್ನು ಬಿಟ್ಟರು. ಹೊಸಬ ತನ್ನ ಕಪ್ಪೆಯ ಬೆನ್ನು ತಟ್ಟಿದ. ಕೂಡಲೇ ಅದು ಒಂದು ಗಜದಷ್ಟುದೂರಕ್ಕೆ ಕುಪ್ಪಳಿಸಿತು.

"ಹುಸ್, ಇಷ್ಟೇನೇ? ನನ್ನ ಕಪ್ಪೆ ನೋಡುತ್ತಿರು ನಾಲ್ಕು ಗಜ ಹೀಗೇ ಹಾರಿಬಿಡುತ್ತದೆ" ಎಂದು ಸೂರಪ್ಪ, ತನ್ನ ಕಪ್ಪೆಯ ಬೆನ್ನಿನ ಮೇಲೆ ಬೆರಳಿಂದ ತಿವಿದು "ಹಾರು, ತಮ್ಮಾ, ಹಾರು" ಎಂದ ಮಾಮೂಲಾಗಿ. ಆದರೆ ಅದೇನಾಯಿತು ಗೊತ್ತೆ? ಏನಾಯಿತೋ ಪಾಪ!

ಅದು ನೆಗೆಯಬೇಕೆಂದು ಹಲ್ಲು ಕಚ್ಚಿತು. ಆದರೆ ನೆಲಕ್ಕೆ ಅಂಟುಹಾಕಿದಂತೆ ಅಲ್ಲೇ ಉರುಳಿತು. ಇದನ್ನು ನೋಡಿ ಸೂರಪ್ಪನಿಗೆ ಆಶ್ಚರ್ಯ ಕೋಪಗಳುಂಟಾದುವು ಏಕಕಾಲದಲ್ಲಿ. ಹಲ್ಲು ಕಚ್ಚಿಕೊಂಡನು.

ಆದರೂ ಶಾಂತನಾಗಿ "ನಮ್ಮ ಸೀಮೆ ಕೀರ್ತಿ ಉಳಿಸು ತಮ್ಮಾ. ಸೂರಪ್ಪತಾತನ ಹೆಸರು ಕಪ್ಪಾಗಬೇಕೇ?" ಎಂದು ಮತ್ತೆ ಬೆರಳಿನಿಂದ ತನ್ನ ಕಪ್ಪೆಯನ್ನು ತಿವಿದ.

ಪಾಪ, ಆ ಕಪ್ಪೆ ನೆಗೆಯಲು ಮೈಯೆಲ್ಲಾ ಒಂದುಸಾರಿ ಒದರಿತು. ಆದರೆ ಕದಲಲಾಗದೆ ಇದ್ದಲ್ಲೇ ಉಳಿಯಿತು.

ಸೂರಪ್ಪ ಸೋತುಹೋದ. ಮುಖವಿಳಿಯಿತು. ಜನರೆಲ್ಲಾ ಸೂರಪ್ಪನನ್ನು ಗೇಲಿ ಮಾಡಿದರು. ಅವನ ಕೈಯಿಂದ ಹತ್ತು ರೂಪಾಯಿಯನ್ನು ತೆಗೆದುಕೊಂಡು ಹೊಸಬ ಮಾಯವಾದ.

ಅಷ್ಟು ಜನರೆದುರಿನಲ್ಲಿ ತನಗೆ ಅವಮಾನವಾಯಿತೆಂದು ಕೆರಳಿ ಸೂರಪ್ಪತಾತ ತನ್ನ ಕಪ್ಪೆಯ ಹಿಂದಿನ ಕಾಲುಗಳನ್ನು ತಲೆಕೆಳಗಾಗಿ ಹಿಡಿದು, "ಇಷ್ಟು ದಿನ ಸಾಕಿದ ನನಗೆ, ನೀನು ಹುಟ್ಟಿದ ದೇಶಕ್ಕೆ ಅವಮರ್ಯಾದೆ ತಂದೆಯಲ್ಲೋ ಪಾಪಿ" ಎಂದು ಪಟಪಟ ಹಲ್ಲು ಕಚ್ಚಿದ ಅದನ್ನು ಕೊಲ್ಲುವವನಂತೆ.

ಆಗ ಕಪ್ಪೆಯ ಬಾಯಿಂದ ಅವರೆಕಾಳಿನ ಗಾತ್ರದ ನೊರಜು ಕಲ್ಲುಗಳು ಒಂದೊಂದಾಗಿ ಕೆಳಗೆ ಬೀಳುವುದನ್ನು ಕಂಡ.

ತನಗಾದ ಮೋಸವನ್ನು ತಿಳಿದುಕೊಂಡು ಸೂರಪ್ಪ ತಾನು ಹೊಸಬನಿಗೋಸ್ಕರ ಕಪ್ಪೆ ಹುಡುಕಿಕೊಂಡು ಬರಲು ಹೋದಾಗ ಅವನು ತನ್ನಬಿರುದು ಪಡೆದ ಕಪ್ಪೆಗೆ ಒಂದೊಂದೇ ನೊರಜು ಕಲ್ಲು ಬಾಯಿಗೆ ತುರುಕಿ ತಿನ್ನಿಸಿದ್ದಾನೆ! ಕಲ್ಲುಗಳ ಭಾರದಿಂದ ತನ್ನ ಕಪ್ಪೆ ಕುಪ್ಪಳಿಸಲಿಲ್ಲ. ಇನ್ನೇನಿದೆ! ತಾನು ಸೋತುಹೋದ.

ಇಷ್ಟು ದಿವಸಗಳಿಂದ ಸೂರಪ್ಪ ತಾನು ಸಂಪಾದಿಸಿದ್ದ ಕೀರ್ತಿ ಅಂದು ಹಾಳಾಯಿತು. ಆತ ಸಾಕಿದ ಕಪ್ಪೆಯ ಬಿರುದು ನಾಶವಾಯಿತು. ಇಷ್ಟೇ ಅಲ್ಲ, ಶೆಟ್ಟಿಹಳ್ಳಿಯ ಹೆಸರೂ ಸಹ ಹೋಯಿತು.






ಬ್ರಹ್ಮದತ್ತನು ಕಾಶೀ ನಗರವನ್ನು ಆಳುತ್ತಿದ್ದ ಕಾಲದಲ್ಲಿ ಒಂದು ಗ್ರಾಮದಲ್ಲೊಬ್ಬ ಬ್ರಾಹ್ಮಣನಿದ್ದನು. ಆತನು 'ವೇದಭಂ' ಎಂಬ ಮಹಾಮಂತ್ರದಲ್ಲಿ ಸಿದ್ಧಿ ಸಾಧಿಸಿದ್ದನು.

ಗ್ರಹಗಳೆಲ್ಲಾ ಸರಿಯಾಗಿ ಕೂಡುವ ಸಮಯದಲ್ಲಿ ಆಕಾಶದ ಕಡೆಗೆ ನೋಡುತ್ತಾ ಈ ಮಂತ್ರವನ್ನು ಜಪಿಸಿದರೆ ಆಕಾಶದಿಂದ ಚಿನ್ನ, ಬೆಳ್ಳಿ, ಮುತ್ತು, ಹವಳ, ರತ್ನ, ಕೆಂಪು, ನೀಲ ಇತ್ಯಾದಿ ಏಳು ವಸ್ತುಗಳ ವರ್ಷಣವಾಗುತಿತ್ತು. ಅಷ್ಟು ಸಿದ್ಧ ಮಂತ್ರವದು.

ಮಂತ್ರಸಿದ್ಧನಾದ ಈ ಬ್ರಾಹ್ಮಣನನ್ನು ಆಶ್ರಯಿಸಿ ಬೋಧಿಸತ್ವನು ಆತನ ಪ್ರಿಯ ಶಿಷ್ಯನಾದ. ಒಂದುದಿನ ಶಿಷ್ಯನನ್ನು ಸಂಗಡ ಕರೆದುಕೊಂಡು ಆ ಬ್ರಾಹ್ಮಣನು ಅರಣ್ಯಪ್ರಾಂತವನ್ನು ಸೇರಿಕೊಂಡನು.

ಆ ಅರಣ್ಯದಲ್ಲಿ ಐನೂರು ಜನರ ಕಳ್ಳರ ಗುಂಪೊಂದಿತ್ತು. ಅವರು ಈ ಗುರುಶಿಷ್ಯರನ್ನು ತಡೆದರು. ಆದರೆ ಈ ಕಳ್ಳರಲ್ಲಿ ಒಂದು ವಿಚಿತ್ರವಾದ ನಿಯಮವಿತ್ತು. ಅದೇನಂದರೆ,

ಇಬ್ಬರು ಪ್ರಯಾಣಿಕರು ಕಲೆತು ಆ ದಾರಿಯಲ್ಲಿ ಬಂದರೆ ಈ ಕಳ್ಳರು ಅವರಲ್ಲೊಬ್ಬನಿಗೆ ಮನೆಗೆ ಹೋಗಿ ಶಿಕ್ಷಾ ರುಸುಮನ್ನು ತಂದು ತನ್ನ ಸಂಗಡಿಗನನ್ನು ಬಿಡಿಸಿಕೊಂಡು ಹೋಗಲು ಅವಕಾಶ ಕೊಡುತ್ತಿದ್ದರು.

ಹಾಗೆ ಒಂದ ಪ್ರಯಾಣಿಕರಲ್ಲಿ ತಂದೆ ಮಕ್ಕಳಾದರೆ, ತಂದೆ ಮನೆಗೆ ಹೋಗಿ ಹಣ ತಂದು ಮಗನನ್ನು ಬಿಡಿಸಿಕೊಂಡು ಹೋಗಬೇಕು. ತಾಯಿ ಮಗಳಾದರೆ ತಾಯಿಯನ್ನೂ, ಸಹೋದರರಾದರೆ ಅವರಲ್ಲಿ ಯಾರಾದರೊಬ್ಬನನ್ನೂ, ಗುರುಶಿಷ್ಯರಾದರೆ ಶಿಷ್ಯನನ್ನೂ ರುಸುಮು ತರಲು ಮನಗೆ ಕಳುಹಿಸಿಕೊಡುವುದು ಈ ಕಳ್ಳರ ವಾಡಿಕೆ.

ಈಗ ಆ ಕಳ್ಳರು ಬ್ರಾಹ್ಮಣನನ್ನು ತಮ್ಮ ಹತ್ತಿರವೇ ನಿಲ್ಲಿಸಿಕೊಂಡು ಶಿಷ್ಯನಾದ ಬೋಧಿಸತ್ವನಿಗೆ ಶಿಕ್ಷೆಯ ರುಸುಮಿಗಾಗಿ ಹೋಗಿ ಬರಲು ಅಪ್ಪಣೆ ಕೊಟ್ಟರು. ಹಾಗಿ ಅಲ್ಲಿಂದ ಹೊರಡುವ ಮೊದಲು ಬೋಧಿಸತ್ವನು

ಯಚ್. ನಾರಾಯಣರಾವ್



ಗುರುವಿಗೆ ನಮಸ್ಕಾರಮಾಡಿ ಹೀಗೆಂದ: "ಗುರುವರ್ಯರೇ ಭಯಪಡಬೇಡಿ. ಒಂದೆರಡು ದಿನಗಳಲ್ಲಿ ತಪ್ಪದೆ ಹಿಂತಿರುಗುತ್ತೇನೆ. ಆದರೊಂದುಮಾತು, ಇಂದು ಗ್ರಹಗಳೆಲ್ಲಾ ಒಟ್ಟುಗೂಡುವ ದಿನ. ಇಂದು ಮಾತ್ರ ಮಂತ್ರವನ್ನು ಜಪಿಸಿ, ರತ್ನದ ಮಳೆ ಸುರಿಸಬೇಡಿ. ಹಾಗೆ ಮಾಡಿದರೆ ನಿಮಗೂ, ಈ ಕಳ್ಳರಿಗೂ ಮುಪ್ಪು ಖಂಡಿತ." ಹೀಗೆಂದು ಸಾರಿ ಸಾರಿ ಹೇಳಿ ಆತನು ಹಣತರಲು ಪ್ರಯಾಣ ಬೆಳೆಸಿದ.

ಸೂರ್ಯಾಸ್ತಮವಾಯಿತು. ಕಳ್ಳರು ಬಂದು ಬ್ರಾಹ್ಮಣನನ್ನು ಹಿಡಿದುಕೊಂಡರು. ಹುಣ್ಣಿಮೆಯ ಚಂದ್ರನು ಆಕಾಶದಲ್ಲಿ ಓಡಾಡುತ್ತಿದ್ದಾನೆ. ಬ್ರಾಹ್ಮಣನು ತಲೆ ಎತ್ತಿ ನೋಡಿ, ಗ್ರಹಗಳೆಲ್ಲಾ ಕೂಡುವ ಸಮಯ ಬರುತ್ತಿರುವುದನ್ನು ಗ್ರಹಿಸಿದ.

ಆಗ ಆತನಿಗೊಂದು ಯೋಚನೆಯುಂಟಾಯಿತು. 'ಈ ಕಳ್ಳರ ಕೈಯಲ್ಲಿ ಸಿಕ್ಕಿದರೆ ಹಿಂಸೆಗೆ ಗುರಿಯಾಗಬೇಕು. ನನಗೆ ಸಿದ್ಧಿಸಿರುವ ಮಂತ್ರವನ್ನು ಜಪಿಸಿ ರತ್ನಗಳನ್ನು ಉದುರಿಸಿ ಅವರಿಗೆ ಬೇಕಾದಷ್ಟು ಕೊಟ್ಟು ಇವರ ಕೈಯಿಂದ ತಪ್ಪಿಸಿಕೊಳ್ಳಬಾರದೇಕೆ? ಸ್ವೇಚ್ಛೆ ಪಡೆದು ಸುಖವಾಗಿರುತ್ತೇನೆ. ಆ ಶಿಷ್ಯನ ಮಾತು ಕೇಳುವುದೇನು?'

ಹೀಗೆಂದು ಬ್ರಾಹ್ಮಣನು ಕಳ್ಳರನ್ನು ಕುರಿತು, "ಎಲೈ ಅಣ್ಣಗಳಿರಾ, ನೀವೇಕೆ ನನ್ನನ್ನು ಬಂಧಿಸಿರುವಿರಿ? ಹೇಳಿ" ಎಂದು ಕೇಳಿದ. ಅದಕ್ಕೆ ಅವರು "ಮತ್ತೇಕೆ, ಹಣಕ್ಕಾಗಿ" ಎಂದು ಉತ್ತರವಿತ್ತರು.

"ಅಷ್ಟೇತಾನೆ? ಹಾಗಾದರೆ ನಾನು ಹೇಳಿದಂತೆ ಮಾಡಿ. ನೀವು ಕೇಳಿದಷ್ಟು ಧನ ಕೊಡುವೆನು! ಮೊದಲು ನೀವು ನನ್ನ ಕಟ್ಟುಗಳನ್ನು ಬಿಚ್ಚಿ, ನನಗೆ ಶುಭ್ರವಾಗಿ ಸ್ನಾನ ಮಾಡಿಸಿ, ನೂತನ ವಸ್ತ್ರಗಳನ್ನು ತೊಡಿಸಿ, ಪೂಜೆಗೆ ಎಲ್ಲಬಗೆಯ ಹೂಗಳನ್ನು ಇಲ್ಲಿ ತಂದಿಡಿ. ನನ್ನ ಸುತ್ತಲೂ ಪರಿಮಳ ದ್ರವ್ಯಗಳನ್ನೂ, ಧೂಪ ದೀಪಾರತಿಗಳಿಗೆ ಬೇಕಾಗುವ ಸಾಮಗ್ರಿಗಳನ್ನೂ ಅಣಿಮಾಡಿಡಿ. ಆ ತರುವಾಯ ಏನು ನಡೆಯುವುದೋ ನೋಡುವಿರಂತೆ" ಎಂದು ಹೇಳಿದ ಆ ಬ್ರಾಹ್ಮಣ.



ಕಳ್ಳರಿಗೆ ಕುತೂಹಲವಾಯಿತು. ಅದೇನು ನಡೆಯುವುದೋ ನೋಡಿಯೇ ಬಿಡೋಣವೆನಿಸಿತು. ಆ ಬ್ರಾಹ್ಮಣನು ಹೇಳಿದಂತೆ ಕಳ್ಳರು ಎಲ್ಲವನ್ನೂ ಸಿದ್ಧಪಡಿಸಿದರು. ಬ್ರಾಹ್ಮಣನು ಎಲ್ಲ ಗ್ರಹಗಳೂ ಸೇರುವ ಸಮಯ ನೋಡಿ, ಆಕಾಶದ ಕಡೆಗೆ ದೃಷ್ಟಿ ನಿಲ್ಲಿಸಿ 'ವೇದಭ' ಮಂತ್ರವನ್ನು ಜಪಿಸಲು, ಬೆಲೆಬಾಳುವ ಲೋಹ ಮತ್ತು ಮಣಿಗಳು ಸಳಸಳನೆ ಸುರಿದುವು. ಕಳ್ಳರು ಬಹಳ ಆನಂದದಿಂದ ಗಬಗಬನೆ ಅವುಗಳನ್ನು ಆರಿಸಿ, ಮೂಟೆ ಕಟ್ಟಿಕೊಂಡು, ಅವರ ದಾರಿಯನ್ನು ಹಿಡಿದರು. ನಂತರ ಅವರ ಹಿಂದೆಯೇ ಬ್ರಾಹ್ಮಣನೂ ಹೋಗುತ್ತಿದ್ದ.

ಮಧ್ಯ ದಾರಿಯಲ್ಲಿ ಮತ್ತೊಂದು ಕಳ್ಳರ ಗುಂಪು ಎದುರಾಗಿ ಮೊದಲನೇ ಗುಂಪನ್ನು ಆಟಕಾಯಿಸಿತು. "ನಮ್ಮನ್ನು ಏಕೆ ಹೀಗೆ ಅಡ್ಡಗಟ್ಟುವಿರಿ?" ಎಂದು ಕೇಳಿದ ಕಳ್ಳರ ನಾಯಕ. ಎರಡನೇ ಗುಂಪಿನ ಯಜಮಾನ "ಹಣಕ್ಕಾಗಿ ತಿಳಿಯಿತೆ?" ಎಂದ ಗಂಭೀರವಾಗಿ.

"ಓ. ಹಾಗೋ. ಹಣ ಬೇಕಾದರೆ ಈ ಬ್ರಾಹ್ಮಣನನ್ನು ಆಶ್ರಯಿಸಿ. ಈತನು ಆಕಾಶ ನೋಡಿದರೆ ಸಾಕು, ಬೆಲೆಬಾಳುವ ಮಣಿ, ಮಾಣಿಕ್ಯಗಳು ಉದುರುತ್ತವೆ. ಹಾಗೆ ಮಾಡಿ ನಮಗೆ ಈ ಧನವನ್ನು ಕೊಟ್ಟಿರುತ್ತಾನೆ" ಎಂದು ಹೇಳಿ ಅವರು ತಪ್ಪಿಸಿಕೊಂಡರು. ಸರಿ, ಈಗ ಎರಡನೇ ಕಳ್ಳರಗುಂಪು ನಮ್ಮ



ಬ್ರಾಹ್ಮಣನನ್ನು ಹಿಡಿದುಕೊಂಡು "ನಮಗೂ ಹಣ ಕೊಡಿಸಯ್ಯಾ ಬ್ರಾಹ್ಮಣ" ಎಂದು ಬೊಬ್ಬೆಯಿಟ್ಟರು.

ಆಗ ವಿಪ್ರನು "ಅಣ್ಣಂದಿರಾ ನಾನು ಆಗ ಕಳ್ಳರಿಗೆ ಕೊಟ್ಟದ್ದು ಮಂತ್ರದ ಮಹಿಮೆಯಿಂದ ತರಿಸಿದ ಧನ. ನನ್ನಿಷ್ಟಬಂದಾಗಲೆಲ್ಲಾ ಜಪಿಸಿದರೆ ಫಲಿಸುವ ಮಂತ್ರವಲ್ಲ ಅದು. ಎಲ್ಲಾ ಗ್ರಹಗಳೂ ಒಟ್ಟಾಗಿ ಸೇರಿದಾಗ ಮಾತ್ರವೇ ಅದು ಫಲಕಾರಿಯಾಗುವುದು. ಹಾಗೆ ಗ್ರಹಗಳೆಲ್ಲಾ ಒಂದೆಡೆ ಸೇರಬೇಕಾದರೆ ಒಂದು ವರ್ಷ ಬೇಕಾಗುತ್ತದೆ. ಆಗ ಬೇಕಾದರೆ ಮಂತ್ರವನ್ನು ಜಪಿಸಿ ನಿಮಗೆ ಬಂಗಾರದ ಮಳೆ ಸುರಿಸುತ್ತೇನೆ" ಎಂದು ಸತ್ಯವನ್ನೇ ಹೇಳಿದ. ಬ್ರಾಹ್ಮಣನ ಮಾತುಗಳನ್ನು ಕಳ್ಳರು




ನಂಬಲಿಲ್ಲ. "ನಮಗಿಂತ ಮೊದಲು ಬಂದವರನ್ನು ಕುಬೇರರನ್ನಾಗಿ ಮಾಡಿ ಕಳುಹಿಸಿದೆ. ನಾವು ಕೇಳಿದರೆ ಮಾತ್ರ ಒಂದು ವರ್ಷ ಕಾಲ ಕಾದಿರಿ ಎಂದು ಹೇಳುತ್ತಿರುವೆ. ನೀನು ಶುದ್ಧ ಸುಳ್ಳುಗಾರ!" ಎಂದು ಆ ಕಳ್ಳರ ಯಜಮಾನ ಅವನನ್ನು ತನ್ನ ಖಡ್ಗದಿಂದ ಎರಡಾಗಿ ಸೀಳಿ, ಕಳೇಬರವನ್ನು ದಾರಿ ಮಧ್ಯೆ ನೇತು ಹಾಕಿಸಿ ಬಿಟ್ಟನು.

ಅಲ್ಲಿಂದ ಸರಸರನೆ ಓಡಿ, ಮೊದಲನೆಯ ಗುಂಪಿನ ಮೇಲೆ ಬಿದ್ದು, ಅವರೆಲ್ಲರನ್ನೂ ಕೊಂದು, ಹಣವನ್ನು ಅಪಹರಿಸಿದರು.

ಆ ಹಣವನ್ನು ಹಂಚಿಕೊಳ್ಳುವಾಗ ಅವರವರಲ್ಲೇ ತಗಾದೆ ಉಂಟಾಗಿ ಜಗಳವು ಪ್ರಾರಂಭವಾಯಿತು. ಎರಡು ಪಕ್ಷಗಳಾದುವು. ಉಭಯ ಪಕ್ಷಗಳಿಗೂ ಭಾರೀ ಕಾಳಗವಾಯಿತು. ಆ ಹೋರಾಟದಲ್ಲಿ ಇಬ್ಬರು ವಿನಹ ಮಿಕ್ಕವರೆಲ್ಲಾ ಹತರಾದರು.

ಈ ಕಳ್ಳರಿಬ್ಬರೂ ಧನವನ್ನೆಲ್ಲಾ ಸಮೀಪದ ಒಂದು ಅರಣ್ಯದಲ್ಲಿ ಬಚ್ಚಿಟ್ಟರು. ಅವರಲ್ಲೊಬ್ಬನು ಆ ಧನವನ್ನು ಕಾವಲು ಕಾಯುತ್ತಿರಲು ಮತ್ತೊಬ್ಬನು ತಿಂಡಿ ತರಲು ನಗರಕ್ಕೆ ಹೋದನು.

ಧನವನ್ನು ಕಾಪಾಡಿಕೊಂಡು ಕುಳಿತಿದ್ದ ಕಳ್ಳ 'ನನ್ನ ಸ್ನೇಹಿತ ಬಂದರೆ ಇದರಲ್ಲಿ ಅರ್ಧ ಭಾಗ ಕೊಡಬೇಕಾಗುತ್ತದೆ. ಇದನ್ನು ತಪ್ಪಿಸುವುದು ಹೇಗೆ' ಎಂಬ ಆಲೋಚನೆಯಲ್ಲಿ ಬಿದ್ದ.

ತಿಂಡಿತಿನಸುಗಳನ್ನು ತರಲು ತೆರಳಿದ್ದ ಕಳ್ಳ ಸಹ ಇದೇರೀತಿ ಯೋಚಿಸುತ್ತಿದ್ದ: 'ಅವನು ಒಬ್ಬನು ತೀರಿಹೋದರೆ ಈ ಧನವೆಲ್ಲಾ ನನಗೇ ಸೇರುತ್ತದೆ. ನಾನು ಕುಬೇರನಾಗಿಬಿಡುತ್ತೇನೆ' ಈರೀತಿ ಯೋಚಿಸಿ, ಅವನು ತನ್ನ ಪಾಲಿನ ತಿಂಡಿ ಪದಾರ್ಥಗಳನ್ನು ಬೇರೆಯಾಗಿರಿಸಿಕೊಂಡು ಮಿಕ್ಕ ಪದಾರ್ಥಕ್ಕೆ ವಿಷವನ್ನು ಬೆರೆಸಿಬಿಟ್ಟ.

ಎರಡನೆಯವನು ತಿಂಡಿತಿನಸುಗಳನ್ನು ತರುವುದನ್ನು ಕಂಡು, ಧನವನ್ನು ಕಾಯುತ್ತಾ ಕುಳಿತಿದ್ದ ಕಳ್ಳನು ತಟಾಲನೆದ್ದು, ತನ್ನ ಖಡ್ಗದಿಂದ ಅವನ ತಲೆ ಕಡಿದುಬಿಟ್ಟ. ಆ ತರುವಾಯ ಅವನು ವಿಷಬೆರಸಿ ತಂದಿದ್ದ ಪದಾರ್ಥಗಳನ್ನು ಅಡಿಗೆ ಮಾಡಿಕೊಂಡು ತಿಂದು ತಾನೂ ಪ್ರಾಣವನ್ನು ಕಳೆದುಕೊಂಡ.

ಈ ವಿಧವಾಗಿ ಬ್ರಾಹ್ಮಣನೂ, ಎರಡು ಗುಂಪಿನ ಕಳ್ಳರೂ ಸತ್ತುಹೋದರು.

ಒಂದೆರಡು ದಿನಗಳಲ್ಲಿ ಬೋಧಿಸತ್ವನು ಕಳ್ಳರಿಗೆ ಕೊಡಬೇಕಾದ ಹಣ ತೆಗೆದುಕೊಂಡು ಬಂದ. ಗುರುವಿಗಾಗಿ ಹುಡುಕಿದ. ಆತನು ಕಾಣಬರಲಿಲ್ಲ. ಆದರೆ ಎಲ್ಲಿ ನೋಡಿದರೂ ಮಣಿ ಮಾಣಿಕ್ಯಗಳು ಬಿದ್ದಿವೆ. ಹೆಣಗಳೂ ಬಿದ್ದಿವೆ. "ಬ್ರಾಹ್ಮಣನು ನನ್ನ ಮಾತು ಕಿವಿಗೆ ಹಾಕಿಕೊಳ್ಳಲಿಲ್ಲ. ತನ್ನಿಷ್ಟ ಬಂದಂತೆ ವರ್ತಿಸಿದ್ದಾನೆ. ಮೊನ್ನೆ ರಾತ್ರಿ ಈ ಬ್ರಾಹ್ಮಣನೇ ವೇದಭ ಮಂತ್ರ ಜಪಿಸಿ ರತ್ನದ ಮಳೆ ಬರುವಂತೆ ಮಾಡಿರಬಹುದು. ಅದರ ಫಲವಾಗಿ ಎಲ್ಲರೂ ಸತ್ತುಹೋಗಿರಬಹುದು" ಎಂದು ನೆನೆಸಿ, ಆ ಕಾಲು ಹಾದಿಯಲ್ಲೇ ಮುಂದಕ್ಕೆ ಸಾಗಿದ.

ತುಸದೂರ ಹೋಗುವಷ್ಟರಲ್ಲಿ ಗುರುಗಳ ಶವ ಕಾಣಿಸಿತು. 'ಅಯ್ಯೋ ಗುರುವರ್ಯನೇ, ನನ್ನಮಾತು ಕೇಳದೆ ಎಂತಹ ದುರ್ಗತಿಗೆ ಈಡಾದೆ!' ಎಂದು ಪರಿತಪಿಸಿದ. ಸಮಿತ್ತುಗಳನ್ನು ಆರಿಸಿ ತಂದು ಗುರುಗಳ ದಹನ ಕ್ರಿಯೆಯನ್ನು ನಡೆಸಿದ. ವನಕುಸುಮಗಳನ್ನು ಆ ಸ್ಥಳದಲ್ಲಿಟ್ಟು, ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡಿದ.

ಅಲ್ಲಿಂದ ಹಾಗೇ ಮತ್ತಷ್ಟು ದೂರ ಹೋಗಲು ಮೊದಲನೇ ಕಳ್ಳರಗುಂಪಿನ ಐನೂರು ಜನರ ಶವಗಳು ಕಾಣಿಸಿದವು. ಇನ್ನೊಂದಷ್ಟು ದೂರ ಹೋಗಲು ಎರಡನೇ



ಗುಂಪಿನಲ್ಲಿದ್ದ ಕಳ್ಳರ ಹೆಣಗಳು ಬಿದ್ದಿದ್ದವು. ಆದರೆ ಆತನಿಗೆ ಇವರಲ್ಲಿ ಇಬ್ಬರು ಕಳ್ಳರು ತಪ್ಪಿಸಿಕೊಂಡು ಹೋಗಿರುವಂತೆ ಅನುಮಾನವುಂಟಾಯಿತು. 'ಎಲ್ಲಿಗೆ ತಪ್ಪಿಸಿಕೊಂಡು ಹೋಗಿರುತ್ತಾರೆ?' ಎಂದು ತೀವ್ರವಾಗಿ ಆಲೋಚಿಸಿದ. ಅವರು ಧನ ದೋಚಿಕೊಂಡು ಹೋಗಿರುವ ಜಾಡು ಕಂಡುಹಿಡಿದು, ಆ ದಾರಿಯಲ್ಲೇ ಮುಂದೆ ಹೋಗಲು, ಆ ಹಾದಿ ಬೋಧಿಸತ್ವನನ್ನು ಒಂದು ಅಡವಿಗೆ ಕರೆದೊಯ್ದಿತು.

ಆ ಅರಣ್ಯದಲ್ಲಿ ಧನದ ಮೂಟೆಗಳು ಕಾಣಿಸಿದವು. ತಪ್ಪಿಸಿಕೊಂಡು ಹೋಗಿದ್ದರೆಂದಿದ್ದ ಕಳ್ಳರಪೈಕಿ ಒಬ್ಬನ ಶವ ಅಲ್ಲಿ ಕಾಣಿಸಿತು. ಅವನ ಪಕ್ಕದಲ್ಲಿ ತಿಂಡಿತಿನಸುಗಳಿರುವ

ಪಾತ್ರೆಬಿದ್ದಿತ್ತು. 'ಓಹೋ, ಹೀಗೋ ವಿಷಯ' ಎಂದುಕೊಂಡು ಇನ್ನೊಂದು ಹೆಜ್ಜೆ ಮುಂದೆಯಿಟ್ಟ ಬೋಧಿಸತ್ವ. ಅಲ್ಲೊಂದು ಮೂಲೆಯಲ್ಲಿ ಮತ್ತೊಬ್ಬನ ಶವಬಿದ್ದಿದೆ. ಆತನಿಗೆ ಆಗ ಇಲ್ಲಿ ನಡೆದಿರಬಹುದಾದ ವಿಷಯವೆಲ್ಲಾ ತಿಳಿಯಿತು.

ಇದೆಲ್ಲವನ್ನೂ ನೋಡಿ ಬೋಧಿಸತ್ವನು ತುಂಬಾ ವ್ಯಾಕುಲಗೊಂಡನು. 'ಗುರುವರ್ಯರು ನನ್ನ ಮಾತನ್ನು ಪಾಲಿಸಲಿಲ್ಲ. ಒತ್ತಿ ಒತ್ತಿ ಹೇಳಿದರೂ ಸಹ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಆತ್ಮಬುದ್ಧಿ ಸುಖವೆಂದು ಭಾವಿಸಿದರು. ಇದರ ಫಲಿತಾಂಶವೇನಾಯಿತು? ತಾವು ನಾಶವಾಗಿ, ತಮ್ಮೊಂದಿಗೆ ನೂರಾರು ಜನರು ಸಾಯಲು ಮೂಲ ಕಾರಣರಾದರು. ಇತರರ ಹಿತವಚನಗಳಿಗೆ ಬೆಲೆ ಕೊಡದೆ ತಮಗೆ ತೋರಿದ್ದೇ ಒಳ್ಳೆಯದೆಂದು ಭಾವಿಸುವವರಿಗೆ ಇಂತಹ ಶಿಕ್ಷೆಯಾಗುವುದು ಖಂಡಿತ.

ಮಂತ್ರಪ್ರಭಾವದಿಂದ ಭೂಮಿಗೆ ತರಿಸಿದ ಧನಸಂಪತ್ತು ಮಾನವಕೋಟಿಗೆ ಉಪಕಾರವಾಗುವ ಬದಲು ನೂರಾರು ಜನರ ಮರಣಕ್ಕೆ ಕಾರಣಭೂತವಾಯಿತು. 'ಬುದ್ಧಿ ವಕ್ರಮಾರ್ಗ ಹಿಡಿದಾಗ ಒಳ್ಳೆಯ ವಸ್ತುಗಳಿಂದಲೂ ಸಹ ಕೇಡುಂಟಾಗುತ್ತದೆ. ಆ ದೋಷ ವಸ್ತುಗಳಲ್ಲಿಲ್ಲ; ಬುದ್ಧಿಯಲ್ಲಿದೆ. ವಕ್ರಬುದ್ಧಿ ಅಗ್ನಿಜ್ವಾಲೆಯಿದ್ದಂತೆ. ಅದು ಒಬ್ಬರ ನಾಶದಿಂದ ಮುಗಿಯುವುದಿಲ್ಲ. ಮತ್ತೆಷ್ಟೋ ಜನರನ್ನು ನಾಶನ ಮಾಡಿದ ಹೊರತು ಆ ಅಗ್ನಿಶಮನವಾಗುವುದಿಲ್ಲ' ಎಂದು ಬೋಧಿಸತ್ವನು ಅರಣ್ಯವೆಲ್ಲವೂ ಪ್ರತಿಧ್ವನಿಸುವಂತೆ ಹಿತನುಡಿಗಳನ್ನಾಡಿದ. ತನ್ನ ಗುರುಗಳನ್ನು ಉದಾಹರಣೆಗಾಗಿ ತೆಗೆದುಕೊಂಡು, ಎಲ್ಲರಿಗೂ ತಿಳಿಯುವಂತೆ ಬೋಧಿಸಿದ. ಬೋಧಿಸತ್ವನ ಪ್ರವಚನಕ್ಕೆ ವನದೇವತೆಗಳು ಜೈಕಾರ ಮಾಡಿದರು.

ಆ ತರುವಾಯ ಆ ಧನಸಂಪತ್ತೆಲ್ಲವನ್ನೂ ತನ್ನ ಆಶ್ರಮಕ್ಕೆ ತೆಗೆದುಕೊಂಡು ಹೋಗಿ, ಅದೆಲ್ಲವನ್ನೂ ಲೋಕೋಪಕಾರಗಳಿಗೆ ವಿನಿಯೋಗಿಸಿ, ಅನಂತರ ತನ್ನ ಅವತಾರವನ್ನು ಮುಗಿಸಿದ.






ಡೆಲ್ಲಿ ರಾಜ್ಯದ ಅರಸ ಅನಂಗಪಾಲ. ಆತನಿಗೆ ಕಮಲಾವತಿ, ರೂಪಸುಂದರಿ ಎಂಬ ಇಬ್ಬರು ಕುವರಿಯರು. ಹಿರಿಯವಳನ್ನು ಅಜ್ಮೀರ್ ಸಂಸ್ಥಾನದ ರಾಜನಿಗೂ, ಕಿರಿಯುವಳನ್ನು ಕನೂಜ್ ರಾಜನಿಗೂ ಕೊಟ್ಟು, ಅತಿ ವೈಭವವಾಗಿ ವಿವಾಹ ಮಾಡಿದ. ಮದುವೆಯಾದ ಕೊಂಚ ಕಾಲಕ್ಕೆಲ್ಲಾ ಇಬ್ಬರೂ ಸಂತಾನವತಿಯರಾದರು. ಕಮಲಾವತಿಗೆ ಪೃಥ್ವೀರಾಜನೆಂಬ ಪುತ್ರನೂ, ರೂಪಸುಂದರಿಗೆ ಜಯಚಂದ್ರನೆಂಬ ಮಗನೂ ಹುಟ್ಟಿದರು.

ಪೃಥ್ವೀರಾಜನು ಅದೃಷ್ಟಶಾಲಿ. ಏಕೆಂದರೆ ತಂದೆಯ ತರುವಾಯ ಅಜ್ಮೀರು ಸಂಸ್ಥಾನವಷ್ಟೇ ಅಲ್ಲ, ಗಂಡು ಸಂತಾನವಿಲ್ಲದ ಅನಂಗಪಾಲನು ಡೆಲ್ಲೀ ರಾಜ್ಯವನ್ನೂ ಸಹ ಆತನಿಗೇ ಕೊಟ್ಟನು. ಎರಡು ರಾಜ್ಯಗಳ ಅಧಿಪತಿಯಾದ ಪ್ರತಿಭಾವಂತ ಪೃಥ್ವೀರಾಜನು ಪ್ರಭಾವಶಾಲಿಯಾಗಿರುವುದರಲ್ಲಿ ಆಶ್ಚರ್ಯವಾದರೂ ಏನಿದೆ? ಪೃಥ್ವೀರಾಜನು ಪ್ರಭಾವಶಾಲಿಯಾದುದು ಎಷ್ಟು ಸಹಜವೋ, ಆತನ ಉಚ್ಛ್ರಾಯಸ್ಥಿತಿಗೆ ಜಯಚಂದ್ರನು ಕರುಬುವುದೂ ಅಷ್ಟೇ ಸಹಜವಲ್ಲವೇ? ಅನಿರೀಕ್ಷಿತವಾಗಿ ಡೆಲ್ಲಿ ರಾಜ್ಯವನ್ನು, ಜೊತೆ ಮೊಮ್ಮಗನಾದ ತನಗೆ ತಪ್ಪಿಸಿ ಪೃಥ್ವೀರಾಜನಿಗೆ ಕೊಡುವುದು ಅಸೂಯೆಗೆ ಕಾರಣವಾಯಿತು. ಈ ಕಾರಣದಿಂದ ಜಯಚಂದ್ರನಿಗೆ ಪೃಥ್ವಿರಾಜನಮೇಲೆ ಮತ್ಸರ ಉಂಟಾಯಿತು. 'ತನಗಿಲ್ಲದಿದ್ದರೆ ಚಿಂತೆಯಿಲ್ಲ ಪೃಥ್ವೀರಾಜನಿಗೆ ಡೆಲ್ಲಿ ರಾಜ್ಯವಿರಬಾರದು' ಎಂಬ ಕೀಳು ಯೋಚನೆ ಜಯಚಂದ್ರನಲ್ಲಿ ಜನಿಸಿತು. ಈ ಉದ್ದೇಶದಿಂದ ಆತನು ಪೃಥ್ವೀರಾಜನನ್ನು ಕಷ್ಟಗಳ ಪಾಲು ಮಾಡಬೇಕೆಂದೂ ಡೆಲ್ಲಿ ರಾಜ್ಯವನ್ನು ಆತನ ಕೈಯಿಂದ ಬಿಡಿಸಬೇಕೆಂದೂ ನಿರ್ಧರಿಸಿ, ಅದಕ್ಕೆ ಉಚಿತವಾದ ಏರ್ಪಾಟುಗಳನ್ನು ಮಾಡುತ್ತಿದ್ದ.

× × ×

ಜಯಚಂದ್ರನಿಗೆ ಸಂಯುಕ್ತೆ ಎಂಬ ರೂಪವತಿಯಾದ ಮಗಳಿದ್ದಳು. ಸಂಯುಕ್ತೆಯ ಸೌಂದರ್ಯದ ಖ್ಯಾತಿ ದೇಶದೇಶಗಳಲ್ಲೆಲ್ಲಾ ಹರಡಿತ್ತು. ಅನೇಕ ರಾಜಕುಮಾರರು ಆಕೆಯ

ಸುನಂದಾ ಅನಂತರಾಮು, ಗದಗ



ಕೈಹಿಡಿಯಲು ಕಾತುರರಾಗಿದ್ದರು. ಅಂಥವರಲ್ಲಿ ಪೃಥ್ವೀರಾಜನೂ ಒಬ್ಬ.

ಆದರೆ ಪೃಥ್ವೀರಾಜನಿಗೂ ಮಿಕ್ಕವರಿಗೂ ಒಂದು ವ್ಯತ್ಯಾಸವಿದೆ. ಪೃಥ್ವೀರಾಜನು ಸಂಯುಕ್ತೆಯನ್ನು ವರಿಸುವುದಷ್ಟೇ ಅಲ್ಲ; ಆಕೆಯೂ ಸಹ ಪೃಥ್ವೀರಾಜನನ್ನು ಮನಸ್ಸಿನಲ್ಲೇ ವರಿಸಿದ್ದಳು.

ಸಂಯುಕ್ತೆಯನ್ನು ವಿವಾಹವಾಗಬೇಕೆಂಬ ಇಚ್ಛೆಯುಂಟಾದ ಕೂಡಲೇ ಪೃಥ್ವೀರಾಜನು ತನ್ನನ್ನು ಸಾಕಿ ದೊಡ್ಡವನನ್ನಾಗಿ ಮಾಡಿದ ದಾದಿಯ ಹತ್ತಿರಕ್ಕೆ ಹೋಗಿ, ಆಕೆಗೆ ವಿನಯದಿಂದ ನಮಸ್ಕಾರಮಾಡಿ, ತನ್ನ ಪ್ರಬಲ ಆಶೆಯನ್ನು ವ್ಯಕ್ತಪಡಿಸಿದನು. ಮತ್ತೂ ತನ್ನ ಭಾವಚಿತ್ರವನ್ನು ಆಕೆಯ ಕೈಗೆ ಕೊಟ್ಟನು.

ಆ ದಾದಿ ಈ ವಿಷಯ ಕೇಳಿ ಸಂತೋಷಗೊಂಡಳು. ಕೂಡಲೇ ಹೊರಟು ಕನೂಜ್ ಸೇರಿಕೊಂಡಳು. ಉಪಾಯವಾಗಿ ಅಂತಃಪುರವನ್ನು ಪ್ರವೇಶಿಸಿದಳು. ಸಮಯ ನೋಡಿ ಪೃಥ್ವೀರಾಜನು ತನ್ನ ಕೈಗೆ ಕೊಟ್ಟ ಪಟವನ್ನು ಸಂಯುಕ್ತೆಗೆ ಕೊಟ್ಟಳು.

ಆ ಪಟವನ್ನು ತೆಗೆದುಕೊಂಡು ಸಂಯುಕ್ತೆ ಕಣ್ಣಿಗೆ ಒತ್ತಿಕೊಂಡಳು. "ತಾಯಿ, ನಿನ್ನ ಉಪಕಾರ ಮರೆಯಲಾರೆ. ಎಂದಿಗಾದರೂ ಸಂಯುಕ್ತೆ ಪೃಥ್ವೀರಾಜನ ರಾಣಿಯೇ ಎಂದು ತಿಳಿಸಬೇಕು" ಎಂದಳು.

ದಾದಿ ಅರಮನೆಗೆ ಬಂದು ಈ ವಿಷಯ ಹೇಳಲು ಪೃಥ್ವೀರಾಜನು ಆನಂದಪರವಶನಾದನು. ಸಂಯುಕ್ತೆ ಸಮ್ಮತಿ ಸೂಚಿಸಿದುದು ಸರಿಹೋಯಿತು. ಆದರೆ ಜಯಚಂದ್ರನು ಈ ಬಾಂಧವ್ಯಕ್ಕೆ ಒಪ್ಪುವನೇ? ಈ ಸಂಬಂಧಕ್ಕೆ ಆತನು ಒಪ್ಪಿಕೊಳ್ಳಲಾರನೆಂಬ ವಿಷಯ ಪೃಥ್ವೀರಾಜನಿಗೆ ತಿಳಿದ ವಿಷಯವೇ ಆಗಿತ್ತು.

ಅಂದುಕೊಂಡಿದ್ದಂತೆ ಜಯಚಂದ್ರನು ತನ್ನ ಮಗಳ ವಿವಾಹ ಸ್ವಯಂವರವನ್ನು ಗೊತ್ತುಮಾಡಿ ಡಂಗುರ ಹೊಡೆಸಿದ. ಎಲ್ಲರಿಗೂ ಆಹ್ವಾನ ಪತ್ರಿಕೆಗಳು ಹೋದವು. ಆದರೆ ಪೃಥ್ವೀರಾಜನಿಗೆ ಆಹ್ವಾನ ಬರಲಿಲ್ಲ.

ಅದಷ್ಟೇ ಅಲ್ಲ; ಜಯಚಂದ್ರ ಇನ್ನೊಂದು ಕೀಳುಕೆಲಸ ಮಾಡಿದ್ದ. ತನ್ನ ಅರಮನೆಯ ಕಾವಲುಗಾರನಂತೆ ಪೃಥ್ವೀರಾಜನ ವಿಗ್ರಹವೊಂದನ್ನು ತಯಾರುಮಾಡಿಸಿ, ಸಿಂಹದ್ವಾರದ

ಮುಂದೆ ಅದನ್ನು ತರಿಸಿಟ್ಟ. ಸ್ವಯಂವರಕ್ಕೆ ಬಂದ ರಾಜಪುತ್ರರೆಲ್ಲಾ ಆ ವಿಗ್ರಹವನ್ನು ನೋಡುವುದರಿಂದ ಪೃಥ್ವೀರಾಜನಲ್ಲಿ ಅವರಿಗೆ ಜಿಗುಪ್ಸೆಯುಂಟಾಗುವುದೆಂತಲೂ, ಈ ರೀತಿ ತನ್ನ ಅಕ್ಕಸು ತೀರುವುದೆಂದೂ ಭಾವಿಸಿದ.

ಪಾಪ, ಜಯಚಂದ್ರನ ಆಶೆ ಫಲಿಸಲಿಲ್ಲ. ಜಯಮಾಲೆಯನ್ನು ಹಿಡಿದುಕೊಂಡು ಬಂದ ಸಂಯುಕ್ತೆ ದರ್ಬಾರಿನಲ್ಲಿ ಆಸೀನರಾಗಿದ್ದ ರಾಜಪುತ್ರರೆಲ್ಲರ ಕಡೆ ಒಂದುಸಾರಿ ನೋಡಿದಳು. ಆಗ ಎಲ್ಲರೂ ತಮ್ಮ ತಮ್ಮ ಅಂದ ಚಂದಗಳನ್ನು ನೋಡಿಕೊಂಡು ಉಬ್ಬಿಹೋಗುತ್ತಿದ್ದರು. ಸಂಯುಕ್ತೆ ದರ್ಬಾರೆಲ್ಲಾ ಸುತ್ತಿನೋಡಿ, ಮೆಲ್ಲನಡಿಯಿಡುತ್ತಾ ಸಿಂಹದ್ವಾರದಲ್ಲಿದ್ದ ಪೃಥ್ವೀರಾಜನ ಪ್ರತಿಮೆಗೆ ಪೂಮಾಲೆ ಹಾಕಿದಳು.

ಹಾಕಿದ್ದೇ ತಡ, ಮಿಂಚಿನಂತೆ ಪೃಥ್ವೀರಾಜನು ಅಲ್ಲಿಗೆ ಬಂದು, ಕಣ್ಣು ಮಿಟಿಕಿಸುವಷ್ಟರಲ್ಲಿ ಸಂಯುಕ್ತೆಯನ್ನು ಕುದುರೆಯ ಮೇಲೆ ಕೂರಿಸಿಕೊಂಡು ದೌಡಾಯಿಸಿದ. ಇನ್ನೇನಿದೆ? ಸಂಯುಕ್ತೆ ಡೆಲ್ಲಿಕೋಟೆಯನ್ನು ಸೇರಿಬಿಟ್ಟಳು. ಸಂಯುಕ್ತೆ ಈಗ ರಾಣಿ ಸಂಯುಕ್ತೆಯಾದಳು.

ಜಯಚಂದ್ರನು ಸ್ತಂಭಿತನಾದ. ಉಗ್ರನಾದ. ಆದರೆ ಏನುತಾನೇ ಮಾಡಲಾಪನು? ಆತನ ಮನಸ್ಸಿನಲ್ಲಿದ್ದ ದ್ವೇಷಾಸೂಯೆ ಮತ್ತಷ್ಟು ಅಧಿಕವಾಯಿತು. ಸೇಡು ತೀರಿಸಿಕೊಳ್ಳುವ ಸಮಯಕ್ಕಾಗಿ ಆತನು ಎದುರು




ನೋಡುತ್ತಿದ್ದ. ಅಂದು ಜಯಚಂದ್ರನ ಆಶೆ ಫಲಿಸಿತಾದರೂ ಈಗ ತಟಾಲನೆ ಒಂದು ಅವಕಾಶ ಒದಗಿಬಂತು. ಮುಹಮ್ಮದ್ ಗೋರಿ ನಮ್ಮ ಭರತಖಂಡದಮೇಲೆ ದಂಡೆತ್ತಿಬಂದು ಊರುಗಳನ್ನು ಕೊಳ್ಳೆ ಹೊಡೆದ, ಮೆದೆಗಳಿಗೆ ಕೊಳ್ಳಿಯಿಟ್ಟ, ಗುಡಿಗೋಪುರಗಳನ್ನು ನೆಲಸಮ ಮಾಡಿದ. ಕಣ್ಣಿಗೆ ಕಾಣಿಸಿದ ಹಿಂದೂಗಳನ್ನು ಕತ್ತಿಗೆ ಬಲಿಕೊಟ್ಟ.

ಈರೀತಿ ಭರತಖಂಡ ಸರ್ವನಾಶವಾಗುತ್ತಿರುವುದನ್ನು ಪೃಥ್ವೀರಾಜನು ಸಹಿಸಲಾರದೆ ಹೋದ. ತನ್ನ ಕೈಕೆಳಗಿದ್ದ ಸಾಮಂತರಾಜರನ್ನೆಲ್ಲಾ ಒಟ್ಟುಗೂಡಿಸಿ, ಪರಿಸ್ಥಿತಿಯನ್ನು ಅವರಿಗೆ ತಿಳಿಸಿದ. ದೇಶಗೌರವವನ್ನು ಕಾಪಾಡಲು ಎಲ್ಲರೂ ಶಕ್ತಿಮೀರಿ ಸಹಾಯ ಮಾಡಬೇ



ಕೆಂದು ಕೋರಿದ. ಒಬ್ಬ ಜಯಚಂದ್ರನ ಹೊರತು ಮಿಕ್ಕವರೆಲ್ಲರೂ ಆತನ ಮಾತನ್ನು ಶಿರಸಾವಹಿಸಿದರು. ಸಾಮಂತರೆಲ್ಲರೂ ಸಹಾಯ ಮಾಡಲು ಸಿದ್ಧರಾದುದರಿಂದ ಪೃಥ್ವೀರಾಜನಿಗೆ ಅಧಿಕ ಬಲ ಬಂದಂತಾಯಿತು. ಆತನು ಮುಹಮ್ಮದ್ ಗೋರಿಯನ್ನು ಹಣ್ಣುಮಾಡಿ ಓಡಿಸಿದ. ಯುದ್ಧದಲ್ಲಿ ಸೋತ ಗೋರಿ ಏಟುತಿಂದ ಹಾವಿನಂತೆ ಸೇಡು ತೀರಿಸಿಕೊಳ್ಳಲು ಹವಣಿಸುತ್ತಿದ್ದ. ಗೋರಿ ಆ ರೀತಿ ಸಿದ್ಧವಾಗುವುದು ಸಹಜ. ಆದರೆ ಗೋರಿಯ ಅಪಜಯವು ತನ್ನ ಸೋಲೆಂದು ಭಾವಿಸಿದ ಜಯಚಂದ್ರ. ಆತನು ಗೋರಿಗಿಂತಲೂ ಹೆಚ್ಚು ಕಳವಳಪಟ್ಟ. 'ಪೃಥ್ವೀರಾಜನ ಹುಟ್ಟು ಅಡಗಿಸುವುದು ಎಂತು?' ಎಂದು



ಗೋರಿಗಿಂತಲೂ ಜಯಚಂದ್ರನೇ ಹತ್ತು ಪಾಲು ಹೆಚ್ಚಾಗಿ ಯೋಚಿಸ ತೊಡಗಿದ.

ಜಯಚಂದ್ರನು ಸಮಯ ಸಾಧಿಸಿ ನೆರೆ ಹೊರೆಯ ರಾಜರನ್ನು ಕರೆದು, ಪೃಥ್ವೀರಾಜನ ಮೇಲೆ ಅನೇಕ ಚಾಡಿ ಹೇಳಿ ಅವರ ಮನಸ್ಸು ಕೆಡಿಸಿದ. ಪೃಥ್ವೀರಾಜನೆಂದರೆ ಅವರಿಗೆ ಅಸಹ್ಯ ಉಂಟಾಗುವಂತೆ ಮಾಡಿದ. ಹೀಗೆ ತಾನು ಮಾಡಿದ ಈ ಕೀಳು ಕಾರ್ಯಕ್ಕೆ ವಿಜಯಗರ್ವ ಹೊಂದಿದ. ಆದರೂ ತೃಪ್ತಿಯಿಲ್ಲದಾಯಿತು. 'ಜನ್ಮಶತ್ರುವಾದ ಪೃಥ್ವೀರಾಜನು ತಲೆ ಎತ್ತದಂತೆ ಮಾಡುವುದೆಂತು?' ಇದೇ ಆತನಿಗೆ ಸದಾ ಯೋಚನೆ. ಒಂದುದಿನ ಡೇರೆಯಲ್ಲಿ ಈ ರೀತಿ ಆಲೋಚಿಸುತ್ತಾ ಕುಳಿತಿರುವಾಗ ಜಯಚಂದ್ರನನ್ನು ಹುಡುಕಿಕೊಂಡು ಒಬ್ಬ ಸೈನಿಕನು ಬಂದ.

ಜಯಚಂದ್ರನು ಏಕಾಂತದಲ್ಲಿರುವ ಸಮಯದಲ್ಲಿ ಆ ಸೈನಿಕನ ವೇಷ ಧರಿಸಿದ್ದ ಸಂಯುಕ್ತೆ ತಂದೆಯ ಪಾದಗಳಮೇಲೆ ಬಿದ್ದು "ಅಪ್ಪಾ, ಈಗಾಗಲೇ ನಮ್ಮ ದೇಶ ಹಾಳಾಗಿದೆ. ಒಳಸಂಚನ್ನು ನಿಲ್ಲಿಸು. ಕಾರ್ಪಣ್ಯವನ್ನು ತೊರೆ. ಕಾರುಣ್ಯವನ್ನು ವಹಿಸು. ಕುಲಗೌರವವನ್ನು ಕಾಪಾಡು. ದೂರಾಲೋಚನೆ ಮಾಡು" ಎಂದು ಅನೇಕ ವಿಧವಾಗಿ ಪ್ರಾರ್ಥಿಸಿದಳು.

ಅತಿಮೂರ್ಖನಾದ ಜಯಚಂದ್ರ ಈ ಮಾತುಗಳನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. "ಕುಟುಂಬದ್ರೋಹಿ, ನೀನೇ





ಇದಕ್ಕೆಲ್ಲಾ ಕಾರಣ. ಛಿ, ಹೋಗು. ಇಲ್ಲಿಂದ ತೊಲಗು. ನನ್ನ ಮುಂದೆ ನಿಲ್ಲಬೇಡ" ಎಂದು ಗರ್ಜಿಸಿ, ಅಲ್ಲಿಂದ ಎದ್ದು ಒಳಕ್ಕೆ ಹೊರಟು ಹೋದ.

ಕುಗ್ಗಿ ಕೃಶವಾದ ಹೃದಯದಿಂದ ಮನೆ ಸೇರಿದಳು ಸಂಯುಕ್ತೆ.

ಪೌರುಷಶಾಲಿಯಾದ ಪೃಥ್ವೀರಾಜನು ಹೋರಾಟ ನಿಲ್ಲಿಸಲಿಲ್ಲ. ಈಗ ಆತನ ಸಾಮಂತರೆಲ್ಲರೂ ಆತನಿಗೆ ಪ್ರತಿಕೂಲ ರಾದರು. ಆತನು ಒಬ್ಬೊಂಟಿಗನಾಗಿ ಕಾದಾಡಬೇಕಾಯಿತು. ಆದುದರಿಂದ ಆತನ ಸಹಧರ್ಮಿಣಿ ಸಂಯುಕ್ತೆ ಈ ಸಾರಿ ರಣ ರಂಗಕ್ಕೆ ಇಳಿದು ತನ್ನ ಕರ್ತವ್ಯವನ್ನು ನೆರ ವೇರಿಸಬೇಕಾಗಿಬಂತು.

ಆದರೇನು. ಅದೃಷ್ಟ ಪ್ರತಿಕೂಲವಾದ ಪೃಥ್ವೀರಾಜನ ಪತನವಾಗಲೇಬೇಕಾಯಿತು. ಕೊನೆಯ ವರೆವಿಗೂ ಯುದ್ಧರಂಗದಲ್ಲಿ ಹೋರಾಡಿ, ವೀರಸ್ವರ್ಗವನ್ನು ಸೇರಿದ ಪೃಥ್ವೀರಾಜ. ರಾಜನು ಮರಣಿಸಿದಕೂಡಲೇ ರಾಜಕುಟುಂಬದ ಸ್ತ್ರೀಯರಿಗೆ ರಕ್ಷಣೆ ಇಲ್ಲ ವಾಯಿತು. ತಮ್ಮ ಶೀಲವನ್ನು ಕಾಪಾಡಿ ಕೊಳ್ಳಲು ಅವರು ತವಕಗೊಂಡರು. ಸಂಯುಕ್ತೆ ಕೂಡಲೇ ಸಹಗಮನಕ್ಕೆ ತಯಾ ರಾದಳು. ಜೊತೆಯ ಮಹಿಳೆಯರನ್ನೂ ಸಿದ್ಧ ಪಡಿಸಿದಳು. ಈ ರೀತಿ ಅವರು ಗುಟುಕು ಪ್ರಾಣಕ್ಕೆ ಆಶಿಸದೆ ರಾಜಾಸ್ಥಾನದ ಖ್ಯಾತಿ ಯನ್ನು ನಿಲ್ಲಿಸಿ ತ್ಯಾಗಮೂರ್ತಿಗಳಾದರು. ರಾಜಾಸ್ಥಾನದ ಚರಿತ್ರೆಯಲ್ಲಿ ಸಂಯುಕ್ತೆ ಪೃಥ್ವೀರಾಜರ ಹೆಸರುಗಳು ಸುವರ್ಣಾಕ್ಷರ ಗಳಲ್ಲಿ ಲಿಖಿತವಾದವು.

ತನ್ನ ಕೋರಿಕೆ ನೆರವೇರುವುದನ್ನೇ ಗುರಿ ಯಾಗಿಟ್ಟುಕೊಂಡಿದ್ದ ಮೂರ್ಖ ಜಯಚಂದ್ರ ನಿಗೆ ತಕ್ಕ ಶಾಸ್ತಿ ಆಯಿತು. ಕಾಲಸರ್ಪ ದಂತಿದ್ದ ಗೋರಿ ತನ್ನ ಕೆಲಸ ಮುಗಿದ ಕೂಡಲೇ ಅವನ ಕಣ್ಣುಗಳನ್ನೂ ತಿವಿಸಿದನು. ರಾಜ್ಯ ಕಿತ್ತುಕೊಂಡು ತಲೆ ಕಡಿಸಿದ್ದರೆ ಸರಿ ಯಾದ ಶಿಕ್ಷೆಯಾಗಿರುತ್ತಿತ್ತು. ಕುಟಿಲನೂ, ದೇಶದ್ರೋಹಿಯೂ ಆದ ಜಯಚಂದ್ರನಿಗೆ ಇದು ತೀರ ಕಡಿಮೆ ಶಿಕ್ಷೆ ಎಂದು ಜನರೆಲ್ಲಾ ಹೇಳಿಕೊಂಡರು.



# ಮಾ ನ ವ ಜ ನ್ಮ



ಉತ್ತಮವೆಂದು ಹೇಳಲ್ಪಡುವ ಮಾನವ ಜನ್ಮವನ್ನು ಎತ್ತಲಿಕ್ಕೆ ಮುಂಚೆ ನಾವು ಎಷ್ಟೋ ಸ್ವರೂಪಗಳನ್ನು ಹೊಂದಿದ್ದೇವೆ. ಸೃಷ್ಟಿಯ ಆದಿಯಲ್ಲಿ ಮೀನುಗಳೂ, ಕಪ್ಪೆಗಳೂ, ಮೊದಲಾದ ಜಲಚರಗಳು ಹುಟ್ಟಿದುವು. ಬೆನ್ನೆಲುಬುಳ್ಳ ಜಂತುಗಳಲ್ಲಿ ಮೀನುಗಳನ್ನೆ ಮೊದಲು ಹೇಳಬಹುದು. ಅವುಗಳ ಹಿಂದೆ ಮೊಟ್ಟೆಯಿಡುವುವೂ, ಭೂಮಿ-ನೀರುಗಳಲ್ಲಿ ಸಂಚರಿಸಬಲ್ಲ ಪ್ರಾಣಿಗಳೂ ಹುಟ್ಟಿದುವು. ಇಲ್ಲಿ ಸೃಷ್ಟಿನಿಂತು ಎರಡು ಕವಲಾದುವು-ಒಂದು ಕಡೆ ಹರಿಯುವ ಜಂತುಗಳೂ, ಗಾಳಿಯಲ್ಲಿ ಹಾರುವ ಖೇಚರಗಳೂ, ಮತ್ತೊಂದುಕಡೆ ಹಾಲೂಡುವ ಪ್ರಾಣಿಕೋಟಿಗಳೂ ಅವತರಿಸಿದವು. ಹಾಲೂಡುವ ಪ್ರಾಣಿಗಳಿಂದ ಕ್ರಮವಾಗಿ ಹುಟ್ಟಿಕೊಂಡು ಬಂದುದೇ ಮಾನವಜನ್ಮ. ಈ ಪರಿಣಾಮವನ್ನು ಮೇಲಿನ ಚಿತ್ರ ತೋರಿಸುತ್ತದೆ.

# ಕ್ರಯ ಪತ್ರ



**ಯ**ಶಸ್ಕರನು ಕಾಶ್ಮೀರ ದೇಶವನ್ನು ಪರಿಪಾಲಿಸುತ್ತಿರುವ ಕಾಲದಲ್ಲಿ ಕಷ್ಟಪಟ್ಟು ಸಂಪಾದಿಸಿ ದವನ ಹಣವನ್ನು ಮಾತಿನ ಚಾತುರ್ಯದಿಂದ ಒಬ್ಬಾತ ಲಪಟಾಯಿಸಲು ಪ್ರಯತ್ನ ಮಾಡಿದ ಕಥೆಯನ್ನು ಆಗಲೇ ಓದಿರುತ್ತೀರೆಯಷ್ಟೆ!

ಮತ್ತೊಂದುದಿನ ನ್ಯಾಯಶಾಲೆಗೆ ಸೇರಿದ ಉದ್ಯೋಗಿಗಳು ಬಂದು "ಪ್ರಭೂ, ಒಬ್ಬ ಬಡ ಬ್ರಾಹ್ಮಣನು ನಮ್ಮ ಅರಮನೆಯ ಮುಂದೆ ಪ್ರಾಯೋಪವೇಶ ಮಾಡುತ್ತಿದ್ದಾನೆ" ಎಂದು ಹೇಳಿದರು.

ಕೂಡಲೇ ರಾಜನು ಆ ಬ್ರಾಹ್ಮಣನನ್ನು ಕರೆಯಿಸಿಕೊಂಡು "ನಿಮ್ಮ ದೂರು ಏನು?" ಎಂದು ಕೇಳಿದ. ಅದಕ್ಕೆ ಬ್ರಾಹ್ಮಣನು ಹೀಗೆಂದು ಹೇಳಿದ:

"ಕಾಶ್ಮೀರ ದೇಶದ ಮುಖ್ಯ ಪಟ್ಟಣವಾದ ಶ್ರೀನಗರದ ಶ್ರೀಮಂತರಲ್ಲಿ ನಾನೊಬ್ಬ. ಆದರೆ ಪರಿಸ್ಥಿತಿ ಬದಲಾಯಿಸಿತು. ಸ್ಥಿತಿಗತಿಗಳು ಬದಲಾಯಿಸಿದುವು. ಆಸ್ತಿ ಕರಗಿತು. ಸಾಲ ಹೆಚ್ಚಾಯಿತು. ಮನೆ ಮಠ, ಹೊಲ ಗದ್ದೆ ಎಲ್ಲಾ ಮಾರಿ ಚಾಕರಿ ಹುಡಿಕಿಕೊಂಡು ಎಲ್ಲಿಯಾದರೂ ಹೋಗಲು ನಿರ್ಧರಿಸಿದೆ.

ಆ ಊರಿನಲ್ಲೇ ಇದ್ದ ಒಬ್ಬ ವರ್ತಕ ನನ್ನ ಆಸ್ತಿಯನ್ನು ಕೊಂಡುಕೊಂಡ. ಆದರೆ ತೋಟದಲ್ಲಿದ್ದ ಒಂದು ಬಾವಿಯನ್ನು ಮಾತ್ರ ಮಾರದೆ ನನ್ನ ಪತ್ನಿಗಾಗಿ ಉಳಿಸಿದ್ದೆ. ಬೇಸಿಗೆ ಕಾಲದಲ್ಲಿ ಸುತ್ತಮುತ್ತಲಿರುವ ತೋಟಗಳ ಮಾಲೀಕರು ತಮ್ಮ ಗಿಡಬಳ್ಳಿಗಳಿಗಾಗಿ ಈ ಬಾವಿಯಿಂದ ನೀರು ತೆಗೆದುಕೊಂಡು ಹೋಗಿ ಉಪಯೋಗಿಸುವರು. ಈ ಸಹಾಯಕ್ಕಾಗಿ ಅವರು ವರ್ಷಂಪ್ರತಿಸ್ವಲ್ಪ ಹಣ ಕೊಡುತ್ತಿದ್ದರು. ಹೀಗೆ ಬರುವ ಹಣದಿಂದ ನನ್ನ ಪತ್ನಿಯ ಹೊಟ್ಟೆ ಪಾಡು ಕಳೆಯುವುದೆಂದು ಭಾವಿಸಿ, ಬಾವಿಯನ್ನು ಮಾತ್ರ ಮಾರಲಿಲ್ಲ. ನನ್ನ ಪತ್ನಿಯ ಸೌಕರ್ಯಕ್ಕೆ ಉಚಿತವಾದ ಏರ್ಪಾಟು ಮಾಡಿರುವೆನೆಂಬ ಭಾವನೆಯಿಂದ ನಾನು ಯಾವುದೇ ವಿಧವಾದ ಚಿಂತೆಯಿಲ್ಲದೆ ಚಾಕರಿಯನ್ನು ಹುಡುಕಿಕೊಂಡು ದೇಶಾಂತರ ಹೊರಟೆ.

ಕೆಂ. ರಂಗಪ್ಪ, ಬಳ್ಳಾರಿ




ಇಪ್ಪತ್ತು ವರ್ಷಗಳ ನಂತರ ಸ್ವಲ್ಪ ಹಣ ಸಂಪಾದಿಸಿಕೊಂಡು ನನ್ನ ಸ್ವದೇಶಕ್ಕೆ ಹಿಂತಿರುಗಿದೆ. ಅಲ್ಲಿಗೆ ಹೋಗಿ ನೋಡಿದರೆ ನನ್ನ ಪತ್ನಿ ಯಾರ ಮನೆಯಲ್ಲೋ ಊಳಿಗದವಳಾಗಿ ಕೆಲಸ ಮಾಡಿಕೊಂಡು ಹೊಟ್ಟೆ ಹೊರೆದು ಕೊಳ್ಳುತ್ತಿರುವಳೆಂದು ತಿಳಿದು ಬಂತು.

ಈ ವಿಷಯ ಕೇಳಿ ನನಗೆ ಕೋಪ ಬಂತು. ದುಃಖವೂ ಆಯಿತು. ಕೂಡಲೇ ನನ್ನ ಪತ್ನಿಯನ್ನು ಕಂಡುಹಿಡಿದು ಕರೆದು ಈ ಪರಿಸ್ಥಿತಿಗೆ ಕಾರಣವೇನೆಂದು ಕೇಳಲು, ಆಕೆ

'ನೀವು ದೇಶಾಂತರ ಹೋದಮೇಲೆ ನಾನು ಆ ಬಾವಿಯ ಬಳಿಗೆ ಹೋದೆ. ಆಗ ನಮ್ಮ ಮನೆ ಕೊಂಡುಕೊಂಡಿದ್ದ ವರ್ತಕನು ನನ್ನನ್ನು ಹೀನಮಾನವಾಗಿ ಬಯ್ದು, ಹೊಡೆದು, ಹೊರಗೆ ಅಟ್ಟಿದ. ನಾನು ಹೆಂಗಸು ಏನು ಮಾಡಬಲ್ಲೆ?' ಎಂದು ತನ್ನ ಗೋಳು ಹೇಳಿಕೊಂಡಳು.

"ಕೂಡಲೇ ನಾನು ನ್ಯಾಯಾಧಿಪತಿಯ ಹತ್ತಿರ ಹೋಗಿ ಪ್ರಾಯೋಪವೇಶ ಮಾಡಿ, 'ದುಷ್ಟನಾದ ಆ ವರ್ತಕನು ನಮ್ಮ ಬಾವಿಯನ್ನು ಅನ್ಯಾಯವಾಗಿ ವಶಪಡಿಸಿಕೊಂಡಿದ್ದಾನೆ' ಎಂದು ಪಿರ್ಯಾದು ಮಾಡಿದೆ. ಎಲ್ಲಾ ಕೇಳಿ ಉದ್ಯೋಗಿಗಳು ವರ್ತಕನದೇ ನ್ಯಾಯವೆಂದು ತೀರ್ಪಿತ್ತರು. ಅದರಿಂದಾಗಿ ನಾನು ಬಾವಿಯ ಮೇಲಿನ ಅಧಿಕಾರವನ್ನು ಬಿಡಬೇಕಾಯಿತು.

"ಎಷ್ಟು ಜನ ದೊಡ್ಡಮನುಷ್ಯರ ಹತ್ತಿರ ಹೋಗಿ ನನಗೆ ಅನ್ಯಾಯವಾಗಿರುದೆಂದು ಹೇಳಿದರೂ ಅವರು ವರ್ತಕನ ಪಕ್ಷ ವಹಿಸಿಯೇ ಮಾತನಾಡುತ್ತಿದ್ದರು" ಎಂದು ನಡೆದ ಸಮಾಚಾರವನ್ನು ಹೇಳಿ ಹೀಗೆ ಮುಂದುವರೆಸಿದ:

"ಮಹಾಪ್ರಭು, ನಾನು ಅಮಾಯಕ. ಈ ದಾವಾ, ಫಿರ್ಯಾದು ಮುಂತಾದುವೇನೂ ನನಗೆ ತಿಳಿಯದು. ಆಗಲೂ ಈಗಲೂ ನನ್ನದು ಒಂದೇ ಮಾತು. ಮನೆ ಮತ್ತು ಹಿತ್ತಲು ಮಾತ್ರ ಮಾರಿದೆನೇ ಹೊರತು, ಭಾವಿಯನ್ನು ಮಾರಲಿಲ್ಲ. ನಾನು ಪ್ರಮಾಣಮಾಡಿ ಹೇಳುತ್ತೇನೆ. ಆದುದರಿಂದ ಆಳುವ ಮಹಾಸ್ವಾಮಿಯವರು ಈ ವಿಷಯದಲ್ಲಿ ನ್ಯಾಯವನ್ನು ಅನುಗ್ರಹಿಸದಿದ್ದರೆ, ಅರಮನೆಯ

ಮುಂದೆ ಪ್ರಾಣತ್ಯಾಗ ಮಾಡದೆ ಗತ್ಯಂತರ ವಿಲ್ಲ" ಎಂದು ಮುಗಿಸಿದನು.

× × ×

ಮಾರನೇಯ ದಿನ ಯಶಸ್ಕರನು ವಿಚಾರಣೆಗೆ ಕುಳಿತುಕೊಂಡ. ವಾದಿ, ಪ್ರತಿವಾದಿ, ಸಾಕ್ಷಿಗಳೂ, ಇದುವರೆವಿಗೂ ಈ ಫಿರ್ಯಾದನ್ನು ತೀರ್ಪುಕೊಟ್ಟ ಅಧಿಕಾರಿಗಳೂ ಎಲ್ಲರೂ ರಾಜಾಜ್ಞೆಯ ಪ್ರಕಾರ ಹಾಜರಾದರು. 'ವಿಚಾರಣೆ ನಡೆದ ಬಗೆ ಹೇಗೆ?' ಎಂದು ಹಾಕಿದ ಪ್ರಶ್ನೆಗೆ ನ್ಯಾಯಾಧಿಪತಿಗಳು "ಪ್ರಭೂ, ನಾವು ಪ್ರತಿಸಾರಿಯೂ ನ್ಯಾಯವಾಗಿಯೇ ವಿಚಾರಣೆ ಮಾಡಿ ತೀರ್ಪನ್ನು ಕೊಟ್ಟಿರುತ್ತೇವೆ. ದುರುಳನಾದ ಬ್ರಾಹ್ಮಣ ನಮ್ಮ ತೀರ್ಪನ್ನು ಗಣನೆಗೆ ತಾರದೆ ಅಸಲು ಕ್ರಯಪತ್ರವೇ ಮೋಸಕಲ್ಪಿತವೆಂದು ಹೇಳುವಷ್ಟು ಸಾಹಸ ಮಾಡಿದ್ದಾನೆ" ಎಂದು ಹೇಳಿದರು.

ಆಗ ರಾಜನು ಪತ್ರವನ್ನು ತೆಗೆದುಕೊಂಡು ಪರಿಶೀಲಿಸಿ ನೋಡಿದ. 'ಬಾವಿ ಸಹಿತವಾಗಿ ಮನೆ, ತೋಟಗಳನ್ನು ಮಾರಲಾಗಿದೆ' ಎಂದು ಅದರಲ್ಲಿ ಸ್ಪಷ್ಟವಾಗಿ ಬರೆಯಲಾಗಿತ್ತು.

ಆಲೋಚನೆಯಲ್ಲಿ ಬಿದ್ದ ರಾಜ. ತರುವಾಯ ಸಭೆಯಲ್ಲಿದ್ದವರ ಹತ್ತಿರ ಅದೂ ಇದೂ ಮಾತನಾಡುತ್ತಾ ಕುಳಿತುಕೊಂಡ. ಮಾತಿನ ಸಂದರ್ಭದಲ್ಲಿ ರತ್ನಗಳ ಮಾತು ಬಂತು. ರಾಜ ಅಲ್ಲಿದ್ದವರ ಉಂಗುರಗಳನ್ನು ತೆಗೆದುಕೊಂಡು ಅವುಗಳನ್ನು ಸೂಕ್ಷ್ಮವಾಗಿ




ಪರಿಶೀಲಿಸಿ ನೋಡುತ್ತಿದ್ದ. ಆತರುವಾಯ ತಮಾಷೆಯಾಗಿ ನಗೆಯಾಡುತ್ತಾ, ಇತರರ ಹತ್ತಿರದಿಂದ ತೆಗೆದುಕೊಂಡಂತೆಯೇ ಪ್ರತಿವಾದಿಯಾದ ವರ್ತಕನ ಹತ್ತಿರದಿಂದಲೂ ಉಂಗುರ ತೆಗೆದುಕೊಂಡು 'ನಾನು ಈಗಲೇ ಬರುವೆನು. ನೀವಿಲ್ಲೇ ಇರಿ' ಎಂದು ಅಲ್ಲಿಂದ ಎದ್ದು ಹೋದ.

ಹಾಗೆ ಹೊರಗೆ ಬಂದು ಆ ಉಂಗರವನ್ನು ರಾಜಭಟನ ಕೈಗೆ ಕೊಟ್ಟು "ಈ ಉಂಗುರ ತೆಗೆದುಕೊಂಡು ನೀನು ವರ್ತಕನ ಮನೆಗೆ ಹೋಗು. ವರ್ತಕನ ಗುಮಾಸ್ತನನ್ನು ಭೇಟಿ ಮಾಡು. ಈ ಉಂಗುರ ತೋರಿಸಿ 'ಅಯ್ಯಾ ಇಂತಹ ವರ್ಷದ ಕರಡುಪುಸ್ತಕ ಬೇಕು ಕೊಡು' ಎಂದು ಅದನ್ನು ತಾ" ಎಂದು

ಹೇಳಿ ಕಳುಹಿಸಿದ. ಆ ಕಾಲದಲ್ಲಿ ನಂಬಿಕೆಯುಂಟಾಗಲು ಗುರ್ತಿಗಾಗಿ ಕೊಡುವ ವಸ್ತುವಿಗೆ ಅಭಿಜ್ಞಾನವೆಂದು ಹೇಳುತ್ತಿದ್ದರು.

ರಾಜಭಟನು ವರ್ತಕನ ಮನೆಗೆ ಹೋಗಿ ಉಂಗುರವನ್ನು ಗುಮಾಸ್ತನಿಗೆ ಕೊಟ್ಟು ಕರಡುಪುಸ್ತಕ ಕೊಡುವಂತೆ ಕೇಳಿದ. ಗುಮಾಸ್ತನು ಸಂದೇಹಪಡಲು ಅವಕಾಶವಿಲ್ಲ. ಆತನು ಉಂಗುರವನ್ನು ಹತ್ತಿರ ಇಟ್ಟುಕೊಂಡು, ರಾಜಭಟನು ಕೇಳಿದ ಕರಡುಪುಸ್ತಕ ಕೊಟ್ಟು ಕಳುಹಿಸಿದ.

ಕರಡುಪುಸ್ತಕ ಬಂದಕೂಡಲೇ ರಾಜನು ಅದನ್ನು ಪರಿಶೀಲಿಸಿದ. ದಾಖಲುಗಳ ನಡುವೆ ಒಂದೆಡೆ ಜಮೀನುಪತ್ರ ಬರೆದಾತನಿಗೆ ಸಾವಿರ ರೂಪಾಯಿ ಕೊಟ್ಟಿರುವಂತೆ ಬರೆದಿತ್ತು.

ಕ್ರಯಪತ್ರ ಬರೆದಾತನಿಗೆ ಸಾವಿರ ರೂಪಾಯಿ ಕೊಡುವುದೆಂದರೆ ತೀರಾ ಸೋಜಿಗವಾಗಿ ತೋರಿತು. 'ವರ್ತಕನು ಇಷ್ಟೊಂದು ಹಣ ಬರೆದಾತನಿಗೆ ಕೊಡುವುದರಲ್ಲಿ ಏನೋ ಒಂದು ವಿಷಯವಿರಲೇಬೇಕು' ಎಂದು ಯೋಚಿಸುತ್ತಿರುವಲ್ಲಿ ಆತನಿಗೆ ರಹಸ್ಯ ತಿಳಿದುಹೋಯಿತು. ಕೂಡಲೇ ರಾಜನು ದರ್ಬಾರಿನಲ್ಲಿದ್ದವರಿಗೆ ಕರಡುಪುಸ್ತಕ ತೋರಿಸಿದ. ಪತ್ರ ಬರೆದಾತನನ್ನು ಕರೆಯಿಸಿ ಪ್ರಶ್ನೆಮಾಡಿದ.

“ಮಹಾಪ್ರಭೂ, ಅಪರಾಧವನ್ನು ಮನ್ನಿಸಬೇಕು. ನಾನು ಈ ವರ್ತಕನಿಂದ ಸಾವಿರ ರೂಪಾಯಿ ಪಡೆದುದು ಸತ್ಯವಾದ ಮಾತು. 'ಬಾವಿರಹಿತವಾಗಿ' ಎಂಬ ಮಾತನ್ನು 'ಬಾವಿಸಹಿತವಾಗಿ' ಎಂದು ತಿದ್ದಿ ಬದಲಾಯಿಸಿ ಬರೆದ ಮಾತೂ ನಿಶ್ಚಯ. ಪ್ರಭುಗಳು ಕರುಣಾಮಯರು. ಕ್ಷಮಿಸಿ ಕಾಪಾಡಬೇಕು' ಎಂದು ಆತನ ಪಾದಗಳಿಗೆ ಎರಗಿದ.

ವರ್ತಕನು ಮಾಡಿದ ಮೋಸ ಎಲ್ಲರಿಗೂ ತಿಳಿಯಿತು. ಹಿಂದೆ ತೀರ್ಪು ಕೊಟ್ಟಿದ್ದ ನ್ಯಾಯಾಧಿಪತಿಗಳೆಲ್ಲಾ ಸ್ತಂಭಿತರಾದರು. ರಾಜನು ಕ್ರಯಪತ್ರ ಬರೆದಾತನನ್ನು ಕ್ಷಮಿಸಿ ಬಿಟ್ಟುಬಿಟ್ಟ. ಆದರೆ ವರ್ತಕನು ಕೊಂಡುಕೊಂಡಿದ್ದ ಮನೆ ಮತ್ತು ತೋಟಗಳನ್ನು ವಾದಿಯಾದ ಬ್ರಾಹ್ಮಣನಿಗೆ ಕೊಡಿಸಿ, ಅಪರಾಧಿಯನ್ನು ರಾಜ್ಯದಿಂದ ಹೊರಕ್ಕೆ ಅಟ್ಟಿದ.



# ಒಂಟಿ ಮಿಟ್ಟಿ



ಬಹಳ ಕಾಲದಹಿಂದೆ ಕಡಪಜಿಲ್ಲೆಯಲ್ಲಿ ಪ್ರಸಿದ್ಧರಾದ ಇಬ್ಬರು ದರೋಡೆಕಾರರಿದ್ದರು. ಅವರು ದಾರಿಕಾದು ಪ್ರಯಾಣಿಕರನ್ನು ದೋಚಿ, ತುಂಬಾ ಧನಗಳಿಸಿದ್ದರು. ಹೀಗೆ ಪಡೆದ ಹಣವನ್ನೆಲ್ಲಾ ಒಂದುಬೆಟ್ಟದಮೇಲೆ ಹೂತಿಡುತ್ತಿದ್ದರು. ಆ ಬೆಟ್ಟದಮೇಲೆ ಒಂದು ಹಲಗೆಯಂತಹ ಚಪ್ಪಡಿಯೊಂದಿತ್ತು. ಆ ದರೋಡೆಕಾರರು–ಒಂಟಿ, ಮತ್ತು ಮಿಟ್ಟಿ- ಅಲ್ಲೇ ಸ್ಥಳಮಾಡಿಕೊಂಡು ತಮ್ಮ ಸಂಪಾದನೆಯನ್ನೆಲ್ಲಾ ಸಮೀಪದಲ್ಲೇ ಬಚ್ಚಿಡುತ್ತಿದ್ದರು. ಅವರು ಹೀಗೆ ಸಂಗ್ರಹಿಸಿದ ಹಣ ಕೆಲವಾರು ಲಕ್ಷ ರೂಪಾಯಿಗಳಾಗಿತ್ತು.

ಒಂದು ದಿನ ಒಬ್ಬ ಪ್ರಯಾಣಿಕ ಆ ದಾರಿ ಗುಂಟ ಹೊರಟಿದ್ದ. ಅಭ್ಯಾಸ ಬಲದಿಂದ ಆ ದರೋಡೆಕಾರರು ಆತನಿಗೆದುರಾಗಿ ಹೋಗಿ, ದೊಣ್ಣೆ ತೋರಿಸುತ್ತಾ "ಏನಯ್ಯಾ ಹಾಗೆ ಮಿಕಮಿಕ ಅಂತ ನೋಡುತ್ತಿರುವೆ. ತೆಗೆ ನಿನ್ನ ಹತ್ತಿರವಿರುವ ಹಣಾನಾ" ಎಂದು ಗದರಿಸಿದರು.

ಆ ಪ್ರಯಾಣಿಕನು ತುಸವಾದರು ಧೃತಿಗೆಡದೆ ಕಿರುನಗೆಬೀರುತ್ತ ಸುಮ್ಮನೆ ನಿಂತುಬಿಟ್ಟ. ಚಾಚೂ ಅಲುಗಾಡಲಿಲ್ಲ. ಸ್ವಲ್ಪ ಸಮಯವಾದನಂತರ ಅವರನ್ನು ಕುರಿತು ಇಂತೆಂದ:

"ಅಯ್ಯಾ ನೀವು ಕಷ್ಟಪಟ್ಟು ಈ ರೀತಿ ಹಣ ಸಂಪಾದಿಸುವುದು ನನಗೆ ತುಂಬಾ ಸಂತೋಷದಾಯಕವಾಗಿದೆ. ಧನವಿಲ್ಲದವನು ಯಾತಕ್ಕೂ ಪ್ರಯೋಜನವಿಲ್ಲವೆಂದು ಹಿರಿಯರು ಹೇಳಿದ್ದಾರೆ. ಆದುದರಿಂದ ಮಾನವನಾಗಿ ಜನಿಸಿದಮೇಲೆ ಸಂಪಾದಿಸಿಯೇ ತೀರಬೇಕು. ಆದರೆ ನನಗೊಂದೇ ಒಂದು ಸಣ್ಣ ಸಂಶಯ. ಈ ಹಣವನ್ನೆಲ್ಲಾ ತೆಗೆದುಕೊಂಡು ಹೋಗಿ ನೀವು ಯಾರನ್ನು ಸಂತೋಷಗೊಳಿಸುತ್ತಿರುವಿರೋ ನನಗೆ ತಿಳಿಯದು. ಇದನ್ನೆಲ್ಲಾ ಹಂಚಿಕೊಂಡು ಅನುಭವಿಸುವ ಆ ಹಿರಿಯರು ನೀವು ಮಾಡುತ್ತಿರುವ ಪಾಪಗಳನ್ನೂ ಸಹ ಹಂಚಿಕೊಳ್ಳುತ್ತಿರುವರೇ? ಈ ವಿಷಯ ತಿಳಿದುಕೊಂಡು

ಬಿ. ಕೊಟ್ಟಾರಿ, ಚೆಳ್ಳಕೆರೆ

ನೀವೆಷ್ಟು ಜನರ ತಲೆ ಒಡೆದರೂ ಪರವಾಯಿಲ್ಲ" ಎಂದು ಸುಮ್ಮನಾದ.

ಆ ಕಳ್ಳರಿಬ್ಬರೂ ಆಲೋಚನೆಯಲ್ಲಿ ಬಿದ್ದರು.

ಆಗ ಆ ದಾರಿಹೋಕನು—ವಾಲ್ಮೀಕಿ ಮಹರ್ಷಿಯ ಕಥೆಯನ್ನು ತಿಳಿಸಿ ಹಿತಬೋಧೆ ಮಾಡಲು ಅವರಿಬ್ಬರೂ ಆತನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಅವರಿಗರಿವಿಲ್ಲದೆಯೇ ಅವರ ಕೈಗಳಲ್ಲಿದ್ದ ದೊಣ್ಣೆಗಳು ಜಾರಿ ಕೆಳಗೆಬಿದ್ದವು!

ಆ ಪ್ರಯಾಣಿಕನು ಅವರನ್ನು ಎಬ್ಬಿಸಿದ. ಆಗ ಅವರು "ಮಹಾನುಭಾವ, ನಾವು ಪರಮ ದುರ್ಮಾರ್ಗಿಗಳು. ಎಷ್ಟು ಜನ ನಿರಪರಾಧಿ ಪ್ರಯಾಣಿಕರನ್ನು ಚಿತ್ರಹಿಂಸೆಗೆ ಗುರಿ ಮಾಡಿರುವೆವೋ ನಮಗೇ ತಿಳಿಯದು. ಯಾಕೋ ಏನೋ ಲಕ್ಷಾಂತರ ರೂಪಾಯಿ ಆಸ್ತಿ ಸಂಪಾದಿಸಿರುವೆವು. ಆ ಬೆಟ್ಟದಮೇಲಿನ ಹಲಗೆಯಹತ್ತಿರ ಬಚ್ಚಿಟ್ಟಿರುವೆವು. ನಿನ್ನನ್ನು ನಾವು ಏನೂ ಮಾಡುವುದಿಲ್ಲ. ನಿನ್ನನ್ನು ಮಾತ್ರವಲ್ಲ, ಬೇರೆಯಾರನ್ನೂ ಏನೂ ಮಾಡುವುದಿಲ್ಲ. ಈ ಧನವೆಲ್ಲಾ ನಿನ್ನದೇ, ನಿನ್ನ ಇಷ್ಟಬಂದಂತೆ ಖರ್ಚುಮಾಡು ನಾವು ನಿನ್ನ ದಾಸಾನುದಾಸರು. ನೀನು ಹೇಳಿದಂತೆ ನಡೆಯುವೆವು. ನಮಗೆ ಮುಕ್ತಿಮಾರ್ಗ ತೋರಿಸು" ಎಂದು ಕೈಕಟ್ಟಿ ನಿಂತರು.

ಆಗ ಪ್ರಯಾಣಿಕನು ಅವರು ಸಂಪಾದಿಸಿದ ಹಣವನ್ನೆಲ್ಲಾ ವಶಮಾಡಿಕೊಂಡ. ಆ ಬೆಟ್ಟದಮೇಲೆಯೇ ಒಂದು ಭಾರಿದೇವಾಲಯ ನಿರ್ಮಿಸಿದ. ದಿವ್ಯವಾದ ಕಲ್ಯಾಣಿ ಕಟ್ಟಿಸಿದ. ದೇವಸ್ಥಾನದಲ್ಲಿ ಶ್ರೀ ಕೊದಂಡರಾಮಸ್ವಾಮಿಯನ್ನು ಪತಿಷ್ಠೆಮಾಡಿಸಿದ.

ಆ ದರೋಡೆಕಾರರ ಹೆಸರು ಶಾಶ್ವತವಾಗಿ ಉಳಿಯುವಂತೆ ಆ ಗ್ರಾಮಕ್ಕೆ 'ಒಂಟಿಮಿಟ್ಟ' ಎಂದು ಹೆಸರಿಟ್ಟರು. ಕಳ್ಳರ ಹೆಸರಿನಲ್ಲಿ ಉದಿತವಾದ ಆ ಗ್ರಾಮ, ಇಂದು ಕಡಪಾ ಜಿಲ್ಲೆಯಲ್ಲಿ ಒಂದು ದಿವ್ಯಕ್ಷೇತ್ರವಾಗಿ, ರಾಮಭಕ್ತರ ನಿವಾಸಸ್ಥಳವಾಗಿದೆ. ಈ 'ಒಂಟಿಮಿಟ್ಟ'ದಲ್ಲಿ ಬಮ್ಮೇರ ಪೋತನಾಮಾತ್ಯನು ಶ್ರೀಮದಾಂಧ್ರ ಭಾಗವತವನ್ನು ರಚಿಸಿದನೆಂದು ಪ್ರತೀತಿಯಿದೆ.






ನಾಗರಾಜರು ನಾಗಲಾಪುರದ ಅಧಿಪತಿ. ಆತ ಧರ್ಮಶೀಲ ಮತ್ತು ದಯಾವಂತ. ಆತನ ಆಸ್ಥಾನದಲ್ಲಿ ನೌಕರಿ ಮಾಡುವ ಮಂತ್ರಿ ಮತ್ತು ಸೇನಾಧಿಪತಿಗಳಿಗೆ ಮಾತ್ರವೇ ಅಲ್ಲದೆ ದಾಸದಾಸೀ ಜನರಿಗೂ ಆತನು ಕೈತುಂಬ ಸಂಬಳ ಕೊಡುತ್ತಿದ್ದನು. ಅಂತಹ ಧರ್ಮಾತ್ಮನಾದ ರಾಜನ ಆಸ್ಥಾನದಲ್ಲಿ ಮುತ್ತಣ್ಣನೆಂಬ ಒಬ್ಬ ನೌಕರನಿದ್ದ. ಮುತ್ತಣ್ಣನಿಗೆ ಮಕ್ಕಳು ಮರಿ ಇರಲಿಲ್ಲ. ಹೆಂಡತಿ ಗಂಡ ಇಬ್ಬರೇ ಇದ್ದವರು. ಕೈತುಂಬಾ ಪ್ರಭುಗಳು ಹಣ ಕೊಟ್ಟರೂ ಅದನ್ನು ಅವರು ಅನುಭವಿಸದೆ, ಹೊಟ್ಟೆಕಟ್ಟಿ ಹಣ ಕೂಡಿಡುತ್ತಿದ್ದರು.

ನಾಗರಾಜರ ರಾಜ್ಯದಲ್ಲಿ ತಾಮ್ರದ ನಾಣ್ಯಗಳೇ ಇರಲಿಲ್ಲ. ಬೆಳ್ಳಿ ನಾಣ್ಯಗಳು ತೀರಾ ವಿರಳ. ಅಲ್ಲಿನ ನೌಕರರ ಸಂಬಳಕ್ಕೆ ಚಿನ್ನದ ನಾಣ್ಯಗಳನ್ನೇ ಕೊಡುತ್ತಿದ್ದರು. ತನಗೆ ಬರುವ ಚಿನ್ನದ ನಾಣ್ಯಗಳನ್ನು ಮುತ್ತಣ್ಣ ಸೇರಿಸಿ ಜೋಪಾನವಾಗಿ ಬಚ್ಚಿಡುತ್ತಿದ್ದನು. ಹೀಗೆ ಕೂಡಿಡುವುದೇ ಆತನಿಗೆ ಆನಂದ. ಲೋಭಿತನವೇ ಅವನ ಅಭ್ಯಾಸ. ಅವನ ಹೆಂಡತಿ ಮಾರಮ್ಮನೂ ಸಹ ಗಂಡನಿಗೆ ಈ ವಿಷಯದಲ್ಲಿ ಅನುಕೂಲವತಿಯಾಗಿದ್ದಳು. ನಿತ್ಯದ ವೆಚ್ಚಗಳಿಗಾಗಿ ನಾಲ್ಕು ನಾಣ್ಯಗಳನ್ನು ವೆಚ್ಚಮಾಡುವುದೆಂದರೆ ಆ ಗಂಡಹೆಂಡತಿಯರಿಗೆ ಪ್ರಾಣವೇ ಹಾರಿಹೋದಂತೆ ಆಗುವುದು. ಪ್ರತಿದಿನ ರಾತ್ರಿ ಮೂಟೆಯಲ್ಲಿ ಕಟ್ಟಿರುವ ಹಣವನ್ನು ಚಾಪೆಯ ಮೇಲೆ ಸುರಿದು, ಅವುಗಳನ್ನು ಎಣಿಸಿ ಮತ್ತೆ ಜೋಪಾನವಾಗಿ ಅವಿತಿಡುವುದು ಅವರ ಪದ್ಧತಿ. ಹಾಗೆ ಲೆಕ್ಕಮಾಡಿದಾಗ "ಅಯ್ಯೋ ಇಂದು ಎರಡು ನಾಣ್ಯಗಳನ್ನು ಖರ್ಚುಮಾಡಬೇಕಾಗಿ ಬಂತಲ್ಲಾ, ಎಷ್ಟು ಹಣ ಹಾಳಾಯಿತು" ಎಂದು ನಿಟ್ಟುಸಿರು ಬಿಡುವರು.

ಹೀಗಿರಲು ಮುತ್ತಣ್ಣನಿಗೆ ಒಂದು ಸಲ ಒಂದು ಯೋಚನೆ ಹೊಳೆಯಿತು. ಕೂಡಲೇ ಹೆಂಡತಿಯನ್ನು ಕೂಗಿ, "ಲೇ, ಲೇ, ನಾನು ಹೇಳಿದಂತೆ ಮಾಡಿದೆಯಾದರೆ ನಾವು ಒಂದು ಬಂಗಾರದ ಮನೆಯನ್ನೇ ಕಟ್ಟಬಹುದು" ಎಂದ. ಈ ಮಾತು ಕೇಳಿ ಮಾರಮ್ಮನ ಮೈ

ಕು. ಸರಳಾ, ಶಿವಮೊಗ್ಗ



ಧನಿಕರ ಹತ್ತಿರಕ್ಕೆ ಹೋಗಿ ಗಂಡನು ಹೇಳಿ ಕೊಟ್ಟಂತೆ ಗೋಳಾಡಲು ಪ್ರಾರಂಭಿಸಿದಳು! ಹಿಂದೆ ಎಂದೂ ತಮ್ಮ ಹತ್ತಿರ ಬಾರದಾಕೆ ಈಗ ಬಂದಿರುವುದನ್ನು ನೋಡಿ ಅವರು ಮರುಕಗೊಂಡು ಸಮಾಧಾನ ಮಾಡಿ ತಮ್ಮ ಮನಸ್ಸಿಗೆ ತೋಚಿದಷ್ಟು ಹಣ ಕೊಟ್ಟು ಸಹಾಯ ಮಾಡಿದರು.

ಕಷ್ಟಪಡದೇನೇ ಕಾಲಕ್ಷೇಪ ಮಾಡುವುದು ಮಾರಮ್ಮನಿಗೆ ಸುಖವಾಗಿ ತೋರಿತು. ಆದರೆ ಒಂದುಸಾರಿ ಸಹಾಯಮಾಡಿದವರ ಎದುರಿಗೆ ಮತ್ತೆ ಯಾವ ಮುಖವಿಟ್ಟುಕೊಂಡು ಹೋಗುತ್ತಾಳೆ? ಎಷ್ಟೇ ಧನಿಕರಾದರೂ ಮಿತಿಮೀರಿ ಎಷ್ಟುದಿನ ತಾನೇ ಸಹಾಯ ಮಾಡುವರು? ಈಗಾಗಲೇ ಊರಿನಲ್ಲಿದ್ದ ಹಿರಿಯರನ್ನು ಕಂಡು ಅವರಿಂದ ಸಹಾಯ ಪಡೆದು ದಾಯಿತು. ಇನ್ನು ಯಾರೂ ಉಳಿದಿರಲಿಲ್ಲ.

ಈ ಸ್ಥಿತಿಯಲ್ಲಿರುವಾಗ ಮುತ್ತಣ್ಣ ಮನೆ ಸೇರಿಕೊಂಡ. ಪರಿಸ್ಥಿತಿ ಆತನಿಗೆ ತಿಳಿಯಿತು. ತನ್ನ ಹಂಚಿಕೆ ನೆರವೇರಿದ್ದಕ್ಕೆ ಆತ ತುಂಬಾ ಸಂತೋಷಪಟ್ಟ. ಈ ರೀತಿ ಹಣವಂತರಿಂದ ಪಡೆದ ಹಣದಿಂದ ಅವರು ಕಾಲಯಾಪನೆ ಮಾಡುತ್ತಾ, ಅಲ್ಪ ಸ್ವಲ್ಪ ಹಣವನ್ನು ಉಳಿಸಿಕೊಂಡರು.

ಕೆಲವು ದಿನಗಳಾದಮೇಲೆ ಮುತ್ತಣ್ಣ ಹೆಂಡತಿಯೊಂದಿಗೆ "ಲೇ, ಮುತ್ತೆ ನಾನು ಕೆಲವುದಿನ ಬೇರೆ ಊರಿಗೆ ಹೋಗುತ್ತೇನೆ. ಹಿಂದೆ ಮಾಡಿದಂತೆಯೇ ನೀನು ..." ಎಂದು

ನವಿರೇಳಿತು. ಆ ಉಪಾಯ ಹೇಳುವಂತೆ ಗಂಡನೊಡನೆ ಅಂಗಲಾಚಿದಳು.

ಆಗ ಮುತ್ತಣ್ಣ "ಮತ್ತೇನಿಲ್ಲ. ನಾನು ಈ ಊರಿಂದ ಹೊರಗೆ ಹೋಗುತ್ತೇನೆ. ನೀನು ನಮ್ಮ ಊರಿನಲ್ಲಿರುವ ಹಿರಿಯ ಮನುಷ್ಯರ ಹತ್ತಿರ ಹೋಗಿ ದುಃಖವನ್ನು ನಟಿಸುತ್ತಾ 'ನನ್ನ ಗಂಡನನ್ನು ರಾಜರು ಬಂಧಿಸಿದ್ದಾರೆ. ನನ್ನದು ಒಂಟಿ ಜೀವನವಾಯಿತು, ಹೆಣ್ಣು ಜೀವ. ದಿಕ್ಕಿಲ್ಲದ ಅನಾಥೆಯಾದೆ' ಎಂದು ಹೇಳು. ಅದರ ಫಲಿತಾಂಶವೇನಾಗುತ್ತದೋ ನೋಡು" ಎಂದ.

ಯೋಚಿಸಿದ್ದಂತೆಯೇ ಮಾರನೆಯ ದಿನ ಬೆಳಗ್ಗೆ ಊರು ಬಿಟ್ಟು ಮುತ್ತಣ್ಣ ಎಲ್ಲಿಗೋ ಹೊರಟು ಹೋದ. ಮಾರಮ್ಮ ನಗರದಲ್ಲಿದ್ದ

ಹೇಳುವಷ್ಟರಲ್ಲಿ ಆಕೆ "ಇಲ್ಲ. ನಾನು ಹೋಗೋದಿಲ್ಲ. ಮತ್ತೆ ಹೋದರೆ ನಮ್ಮ ಗುಟ್ಟು ಹೊರಬೀಳುತ್ತಿದೆ. 'ಹಾಗೆ ಹೊಟ್ಟೆ ಪಾಡು ನಡೆಯದಿದ್ದರೆ ನಿನ್ನ ಬಂಧುಗಳ ಹತ್ತಿರ ಹೋಗಬಾರದೆ? ಎಷ್ಟುದಿನ ಅಂತ ನಿನಗೆ ಬಿಟ್ಟಿ ಕವಳ ಹಾಕಬಲ್ಲೆವು?' ಎಂದು ಹೋದಸಲವೇ ಕೆಲವರು ನನ್ನನ್ನು ಗದರಿಸಿದರು" ಎಂದು ಹೇಳಿದಳು.

"ಭೇಷ್, ಅವರು ನಮಗೆ ಒಳ್ಳೇ ಉಪಾಯವನ್ನೇ ಹೇಳಿಕೊಟ್ಟರು. ನಾನು ಇಂದೇ ಹೊರಟು ಹೋಗುತ್ತೇನೆ. ನೀನು ನಮ್ಮ ಬಂಧುವರ್ಗದವರು ಈ ಸುತ್ತಮುತ್ತ ಎಲ್ಲೆಲ್ಲಿರುವರೋ ಜ್ಞಾಪಕ ಮಾಡಿಕೊಂಡು ಅವರ ಹತ್ತಿರ ಹಣ ಕಸಿದುಕೊಂಡುಬಾ. ಹೋಗು" ಎಂದು ಹೇಳಿ ತಾನೆಲ್ಲಿಗೋ ಹೊರಟು ಹೋದನು. ಸುತ್ತಮುತ್ತಲು ತನಗೆ ನೆನಪಿದ್ದ ಬಂಧುಗಳ ಮನೆಗಳಿಗೆ ಹೋಗಿ ಮಾರಮ್ಮ ತನ್ನ ದುಸ್ಥಿತಿಯನ್ನು ತೋಡಿಕೊಂಡಳು. ಆಕೆಯನ್ನು ಕಂಡು ಅವರೆಲ್ಲ ಮರುಕಪಟ್ಟರು. ತಲಾ ಒಂದೊಂದು ದಿನ ಸರದಿಪ್ರಕಾರ ಆಕೆಯನ್ನು ಆದರಿಸಿ, ಚೊಕ್ಕಟವಾಗಿ ಭೋಜನವಿಟ್ಟು, ಹೋಗುವಾಗ ಯಥಾಶಕ್ತಿ ಹಣ ಕೈಗೆ ಕೊಟ್ಟು ಕಳುಹಿಸುತ್ತಿದ್ದರು. ಈರೀತಿ ಕೆಲವುದಿನಗಳ ಪರ್ಯಂತ ಬಂಧುವರ್ಗದವರು ಮಾರಮ್ಮನನ್ನು ಪೋಷಿಸಿದರು. ಆದರೆ ಈ ವ್ಯವಸ್ಥೆ ಬಹುಕಾಲ ನಡೆಯಲಿಲ್ಲ. ಅವರಿಗೂ



ಆಕೆಯಮೇಲೆ ಜಿಗುಪ್ಸೆ ಉಂಟಾಯಿತು. ಮೊದಮೊದಲು ಆಕೆಯ ಮಾತುಗಳನ್ನು ನಂಬಿದರಾದರೂ, ದಿನಕಳೆದಂತೆ ಅವರಿಗೆ ಅನುಮಾನವುಂಟಾಗ ತೊಡಗಿತು.

ಇಂತಹ ಸಮಯದಲ್ಲಿ ಮಾರಮ್ಮ ಮನೆ ಸೇರಿಕೊಂಡಳು. ಮತ್ತೆ ಕೆಲವು ದಿನಗಳಿಗೆಲ್ಲಾ ಮುತ್ತಣ್ಣ ಹಾಜರಾದ. ಮುತ್ತಣ್ಣ ಬಹಳ ಉತ್ಸಾಹದಿಂದ ಮಾತಿಗಾರಂಭಿಸಿದ. ಆದರೆ ಮಾರಮ್ಮನು ವೈರಾಗ್ಯ ಮನೋಭಾವದಿಂದ ಅವನ ಮಾತಿಗೆ ಕಿವಿಕೊಡದೆ ದೂರದಲ್ಲಿಯೇ ಕುಳಿತಿದ್ದಳು. ಇದನ್ನು ಕಂಡು ಮುತ್ತಣ್ಣ "ಲೇ, ಇಷ್ಟುಮಾತ್ರಕ್ಕೆ ಹೆದರುವುದೆಂದರೇನೇ? ಸರಿಬಿಡು. ನೀನಿನ್ನು ಮನೆಬಿಟ್ಟು ಕದಲಬೇಡ. ಸಿರಿವಂತರಾಗುವ ಮಾರ್ಗ




ನಾನು ನೋಡಿಕೊಳ್ಳುತ್ತೇನೆ" ಎಂದ ಧಿಮಾಕಿನಿಂದ. ಆಗಲೂ ಆಕೆ ಸುಮ್ಮನಿದ್ದಳು.

ಅಂದು ರಾತ್ರಿ ಎಲ್ಲಿಂದಲೋ ಒಂದು ಮುತ್ತನ್ನು ಸಂಪಾದಿಸಿಕೊಂಡು ಬಂದ ಮುತ್ತಣ್ಣ. ಮಾರನೆಯ ದಿನ ಮತ್ತೊಂದು. ಮೂರನೆಯ ದಿನ ಇನ್ನೊಂದು. ಇಂದು ಮುತ್ತು, ನಾಳೆ ಹವಳ. ನಾಳಿದ್ದು ನೀಲ. ಹೀಗೆ ದಿನವೊಂದರಂತೆ ಅಪೂರ್ವವಾದ ಮಣಿಮಾಣಿಕ್ಯಗಳನ್ನು ತೆಗೆದುಕೊಂಡು ಬರಲು ಪ್ರಾರಂಭಿಸಿದ. ಮಾರಮ್ಮನಿಗೆ ಇದೊಂದೂ ಅರ್ಥವಾಗಲಿಲ್ಲ.

ದಿನಾ ರಾತ್ರಿ ಮನೆಗೆ ಹಿಂತಿರುಗುವಾಗ ಮುತ್ತಣ್ಣ ಯಾವುದಾದರೊಂದು ಅಮೂಲ್ಯವಾದ ವಸ್ತುವನ್ನು ತರುತ್ತಿದ್ದ! ಹೀಗೆ ತಂದ ಮಾಣಿಕ್ಯಾದಿಗಳನ್ನು ಅವರು ವರ್ತಕರಿಗೆ ಮಾರುತ್ತಿದ್ದರು. ಒಳ್ಳೇ ಲಾಭ ಬರುತ್ತಿತ್ತು.

ಒಂದು ದಿನ ಆ ದಂಪತಿಗಳು ಒಂದು ನೀಲವನ್ನು ಮಾರುತ್ತಿರುವ ಸಮಯದಲ್ಲಿ ಅನಿರೀಕ್ಷಿತವಾಗಿ ರಾಜಭಟರು ಅವರನ್ನು ಬಂಧಿಸಿ ಒಯ್ದುಬಿಟ್ಟರು.

ಅಷ್ಟೇ ಅಲ್ಲ. ಮುತ್ತಣ್ಣನ ಮನೆಯನ್ನೂ ಶೋಧಿಸಿದರು. ಮುತ್ತಣ್ಣನ ಮನೆ ನೋಡಲು ಚಿಕ್ಕದೇ ಆದರೂ ಒಳಗೆ ಹುಡುಕಿದಷ್ಟೂ, ಅಗೆದಷ್ಟೂ ವಿವಿಧ ಧನರಾಶಿಗಳು ಕಾಣಿಸಿದವು. ಅರಮನೆಯಲ್ಲಿ ಕಳೆದುಹೋಗಿದ್ದ ವಸ್ತುಗಳೆಲ್ಲಾ ಅಲ್ಲಿ ಸಿಕ್ಕಿಬಿಟ್ಟುವು. ಅದೆಲ್ಲವನ್ನೂ ಭಟರು ಅರಮನೆಗೆ ಸಾಗಿಸಿದರು. ಕಳ್ಳತನ ಮಾಡಿದ ಮುತ್ತಣ್ಣ, ಮಾರಮ್ಮರಿಗೆ ಫಾಸಿಶಿಕ್ಷೆ ವಿಧಿಸಲ್ಪಡುವುದೆಂದು ಜನ ತಿಳಿದಿದ್ದರು. ಅಪರಾಧಿಗಳನ್ನು ರಾಜನ ಮುಂದೆ ನಿಲ್ಲಿಸಿದರು. ಅವರು ಕೈಕಟ್ಟಿಕೊಂಡು ಪ್ರಭುಗಳ ಕಾಲಮೇಲೆ ಬಿದ್ದು ತಮ್ಮನ್ನು ರಕ್ಷಿಸುವಂತೆ ಪ್ರಾರ್ಥಿಸಿದರು.

ತುಂಬಿದ ಸಭೆಯಲ್ಲಿ ನಾಗರಾಜರು "ಮುತ್ತಣ್ಣ, ಜೀವನವೆಲ್ಲಾ ಧಾರೆ ಎರೆದು ನೀವು ಈ ಹಣವನ್ನು ಕೂಡಿಹಾಕಿದಿರಿ. ಇದನ್ನು ನೀವೇ ಅನುಭವಿಸುವುದು ನ್ಯಾಯ" ಎಂದು ಆ ಧನರಾಶಿಯನ್ನು ಎರಡು ಚೀಲಗಳಲ್ಲಿ ತುಂಬಿ ಆ ದಂಪತಿಗಳ ತಲೆಯ ಮೇಲೆ ತಲಾ ಒಂದೊಂದು ಮೂಟೆಯನ್ನಿಡಿಸಿದರು.

ಈ ತೀರ್ಪು ಕೇಳಿದ ಜನರು ವಿಸ್ಮಯ ಗೊಂಡು 'ಎಲಾ, ಇದೆಂತಹ ತೀರ್ಪು. ಅದೇನು ತಿಳುವಳಿಕೆ ನಾಗರಾಜರದು?' ಎಂದು ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳುತ್ತಿದ್ದರು.

ಮಾರನೆಯ ದಿನ ಹಣ ತೆಗೆದುಕೊಂಡು ಮುತ್ತಣ್ಣ ಅಕ್ಕಿಗಾಗಿ ಅಂಗಡಿಗೆ ಹೋದ. ಯಾರನ್ನು ಯಾವ ಸೇರು ಕೇಳಿದರೂ 'ಇಲ್ಲ' ಎಂದು ಹೇಳುತ್ತಾ ಬಂದರು. ಎಷ್ಟೊ ಅಂಗಡಿಗಳಿಗೆ ಹೋದರೂ ಅದೇ ಮಾತು. ದಿನಸು ದೊರಕಲಿಲ್ಲ. ಕೇಳಿದಷ್ಟು ಹಣ ಕೊಡುವೆನೆಂದರೂ ದೊರಕದಾಯಿತು. ಈಗ ಮಾಡುವುದಾದರೂ ಏನು? ಪಕ್ಕದ ಗ್ರಾಮಗಳಿಗೆ ಹೋಗಿ ವಿಚಾರಿಸಿದ. ಅಲ್ಲೂ ಅದೇ ರಾಗ!

ಅಯೋಮಯವಾಯಿತು ಮುತ್ತಣ್ಣನ ಬಾಳು ಪಾಪ. ಅವ ಆಗ ಕಣ್ಣು ತೆರೆದ. ಆಗ ಅವನಿಗೆ ತಿಳಿಯಿತು ನಾಗರಾಜರ ಔದಾರ್ಯದ ಗುಟ್ಟು. ಕೂಡಲೇ ಮನೆಗೆ ಹೋಗಿ ಅವಿತಿಟ್ಟಿದ್ದ ಹಣವನ್ನೆಲ್ಲಾ ಹೊರಗೆ ತೆಗೆದ. ಬಂಧು ವರ್ಗದವರಿಂದ ಪಡೆದಿದ್ದ ಹಣವನ್ನು ಹೆಂಡತಿಯೊಂದಿಗೆ ಕೊಟ್ಟು ಕಳುಹಿಸಿದ. ಊರಿನಲ್ಲಿದ್ದ ಹಿರಿಯರಿಂದ ಪಡೆದ ಹಣವನ್ನು ಅವರಿಗೆ ವಾಪಸು ಕೊಟ್ಟು ಕಳುಹಿಸಿದ.

ಈಗ ಮುತ್ತಣ್ಣ ಪೂರ್ತಿ ಬದಲಾಯಿಸಿಬಿಟ್ಟ. ಹಣವೆಂಬುದು ಜೀವನ ಸಾಗಿಸಲು ಉಪಯೋಗಿಸುವ ಒಂದು ಸಾಧನ. ಅಷ್ಟೇ ಹೊರತು ಧನ ಸಂಪಾದಿಸಲೋಸುಗವೇ




ನಾವು ಹುಟ್ಟಲಿಲ್ಲ. ಈ ದಿವ್ಯಸೂಕ್ತ ಈಗ ಆತನ ಮನಸ್ಸಿಗೆ ಹತ್ತಿತು.

"ಅಯ್ಯೋ, ಜೀವನದ ಬಹು ಭಾಗವನ್ನು ವ್ಯರ್ಥವಾಗಿ ಹಾಳುಮಾಡಿಕೊಂಡೆ. ರೀತಿ ನೀತಿ ಇಲ್ಲದೆ ಹಣ ಶೇಖರಿಸಲು ಪ್ರಾರಂಭಿಸಿದೆ. ಕೂಡಿಟ್ಟಷ್ಟೂ ಆಶೆ ಹೆಚ್ಚುತಿತ್ತೇ ಹೊರತು ಕಡಿಮೆಯಾಗಲಿಲ್ಲ. ಮನಸ್ಸಿಗೆ ತೃಪ್ತಿ ಎಂಬುದು ಲೇಶವಾದರೂ ಇಲ್ಲದಾಯಿತು. ದಿಕ್ಕುಗಾಣದ ಈ ಆಶೆಯನ್ನು, ಅರ್ಥವಿಲ್ಲದ ಈ ಆಶೆಯನ್ನು ತೀರಿಸುವ ಕಾಂಕ್ಷೆಯಿಂದ ನನ್ನ ಹೆಂಡತಿಯನ್ನು ಪುಸಲಾಯಿಸಿ ಆಕೆಯ ಬುದ್ಧಿಯನ್ನೂ ಸಹ ಕೆಡಿಸಿದೆ. ಕಂಡ ಕಂಡವರ ಕಾಲು ಹಿಡಿದೆವು. ಕೊನೆಗೆ ಮಣ್ಣು ಮುಕ್ಕಿದೆವು. ಪ್ರಭುಗಳ

ಔದಾರ್ಯದಿಂದ ಹಣದ ಬೆಲೆ ಮತ್ತು ಪ್ರಯೋಜನ ನನಗೆ ಈಗ ತಿಳಿಯಿತು. ಇನ್ನು ನನ್ನ ಸ್ವಲಾಭಕ್ಕಾಗಿ ಊರೂರು ಅಲೆಯುವುದಿಲ್ಲ ಯಾರನ್ನೂ ತೊಂದರೆಪಡಿಸುವುದಿಲ್ಲ. ದಯಾಶೀಲರಾದ ಪ್ರಭುಗಳು ನಮಗೆ ಸಾಕಾಗುವಷ್ಟು ಅನುಗ್ರಹಿಸುತ್ತಿರುವರು. ಅದರಿಂದ ತೃಪ್ತಿಪಡದೆ ಈ ತಾಪತ್ರಯವೆಲ್ಲಾ ಏಕೆ? ಅರ್ಥವಿಲ್ಲದ ತಾಪತ್ರಯ"– ಈ ರೀತಿ ಯೋಚಿಸಿ, ತನ್ನ ಮನೆಯಲ್ಲಿ ನಿಶ್ಚಿಂತೆಯಾಗಿ ಕುಳಿತಿದ್ದ.

ಕೂಡಿಡುವ ದುರಭ್ಯಾಸ ದೂರವಾದ ಕೂಡಲೇ ಮುತ್ತಣ್ಣನಿಗೆ ಧನದ ಮೇಲಿನ ಮಮಕಾರ ಕಡಿಮೆ ಆಯಿತು. ಅದು ಕಡಿಮೆಯಾದೊಡನೆ ಮನಸ್ಸು ಹಗುರವಾಯಿತು. ಹೀಗೆ ಹಗುರವಾದ ಮನಸ್ಸಿನಿಂದ ಒಂದು ವಿಧವಾದ ಹೊಸ ಉತ್ಸಾಹ, ಮತ್ತು ಆನಂದವನ್ನು ಅನುಭವಿಸುತ್ತಿದ್ದ ಮುತ್ತಣ್ಣ.

ಒಂದುದಿನ ರಾಜಭಟರು ಬಂದರು. ಆದರೆ ಈಸಾರಿ ಆ ದಂಪತಿಗಳನ್ನು ಸೆರೆ ಹಿಡಿಯಲು ಬರಲಿಲ್ಲ. ಶುಚಿರುಚಿಯಾದ ಭೋಜನ ಪದಾರ್ಥಗಳನ್ನು ಹೊತ್ತುಕೊಂಡು ಬಂದರು. ಇದನ್ನುಕಂಡು ಮುತ್ತಣ್ಣನಿಗೂ ಅವನ ಮಡದಿಗೂ ಆದ ಆನಂದಕ್ಕೆ ಪಾರವೇ ಇಲ್ಲ. ಅಂದಿನಿಂದ ಮುತ್ತಣ್ಣ ಮತ್ತು ಮಾರಮ್ಮ ಅಡಿಗೆ ಮಾಡುವ ಅಗತ್ಯವಿಲ್ಲವಾಯಿತು. ದಿನಾ ಎರಡು ಹೊತ್ತೂ ಅವರಿಗೆ ಅರಮನೆಯಿಂದ ಊಟ ಬರುತ್ತಿತ್ತು. ಇಷ್ಟೇ ಅಲ್ಲ, ಪ್ರತಿ ಮೊದಲನೇ ತಾರೀಖಿನ ದಿನ ತಪ್ಪದೆ ಮುತ್ತಣ್ಣನಿಗೆ ಸಂಬಳ ಕೈಗೆ ಬರುತ್ತಿತ್ತು. ಇನ್ನಾವ ಕೊರತೆ?

ಈಗ ಹಣ ಸೇರಿಸುವ ಹಾಳು ಕೆಲಸವಿಲ್ಲದುದರಿಂದ ಆ ದಂಪತಿಗಳ ಮನಸ್ಸು ನಿರ್ಮಲವಾಯಿತು. ಪ್ರಭುಗಳ ಸೇವೆಯನ್ನು ರಾತ್ರಿ ಹಗಲೂ ಮಾಡಿ ತಮ್ಮ ಕೃತಜ್ಞತೆಯನ್ನು ಸೂಚಿಸುತ್ತಾ, ಸುಖವಾಗಿದ್ದರು. ಮುತ್ತಣ್ಣನಲ್ಲಿ ಆದ ಈ ಬಗೆಯ ಬದಲಾವಣೆ ಕಂಡು ಪ್ರಭುಗಳಿಗೂ ಪ್ರಜೆಗಳಿಗೂ ಸಹ ಸಂತೋಷವುಂಟಾಯಿತು.



## ಬಣ್ಣದ ಚಿತ್ರ ಕಥೆ - ೫

ಗಂಗಣ್ಣನಿಗೆ ಸುಮ್ಮನಿರಲಾಗಲಿಲ್ಲ. ಮತ್ತೊಮ್ಮೆ ವೇಷ ಬದಲಾಯಿಸಿಕೊಂಡು ರಾಕ್ಷಸನ ಕೋಟೆಗೆ ಹೋದ. ಅಲ್ಲಿರುವ ಅಪ್ಸರಸಿಯನ್ನು ಒಳ್ಳೆದು ಮಾಡಿಕೊಂಡು ಒಳಗೆ ಪ್ರವೇಶಮಾಡಿದ. ಯಥಾಪ್ರಕಾರ ಜ್ವಾಲಾಮುಖನು ಬಂದು "ನರವಾಸನೆ! ನರವಾಸನೆ!!" ಎನ್ನುತ್ತಾ ಹುಂಕಾರ ಮಾಡಿದ. ಅವನ ಮಡದಿ ಮೂದಲಿಸಿದಳು. ರಾಕ್ಷಸ ಊಟ ಮುಗಿಸಿ, ಮಾಯಾ ವೀಣೆಯಿಂದ ಗಾಯನ ಮಾಡಿಸಿದ. ಅದು ಮಾಡಿದ ಅದ್ಭುತ ಗಾನಕ್ಕೆ ರಾಕ್ಷಸನಿಗೆ ನಿದ್ದೆ ಬಂತು.

ಗಂಗಣ್ಣ ಸಮಯ ನೋಡಿ ಆ ವೀಣೆಯನ್ನು ಕಂಕುಳಲ್ಲಿಟ್ಟುಕೊಂಡ. ಅದು ಮಹಿಮೆಯ ವೀಣೆ; ಹಾಡುವುದು ಮಾತ್ರವಲ್ಲ, ಮಾತಾಡುತ್ತಿತ್ತು. ಗಂಗಣ್ಣ ಎತ್ತಿಕೊಂಡು ಹೋಗುವಾಗ ಅದು ಕೂಗಲಿಕ್ಕೆ ತೊಡಗಿತು. ಅದರ ಶಬ್ದಕ್ಕೆ ರಾಕ್ಷಸನು ಎಚ್ಚೆತ್ತು ಗಂಗಣ್ಣನನ್ನು ಓಡಿಸಿಕೊಂಡು ಬಂದ. ಯುಕ್ತಿಗಾರ ಗಂಗಣ್ಣ ಏನೂ ಹೆದರಲಿಲ್ಲ. ತಾನು ಆ ಬಳ್ಳಿಗಿಡದಿಂದ ಚರಚರನೆ ಇಳಿದು ಬಂದು, ಕತ್ತಿಯಿಂದ ಗಿಡವನ್ನು ಕತ್ತರಿಸಿ ಹಾಕಿಬಿಟ್ಟ.

ಓಡಿಬರುವ ರಾಕ್ಷಸ ಗಿಡವನ್ನಿಳಿದೇ ಬರಬೇಕು. ಹಾಗೆ ಬಂದ. ಆದರೆ ಗಿಡ ಕತ್ತರಿಸಿರುವುದರಿಂದ ಅವನು ಪರ್ವತದಂತೆ ಬಿದ್ದು ಭೂಮಿಯೊಳಗೆ ಹುಗಿದುಹೋದ.

ಹೀಗೆ ಜ್ವಾಲಾಮುಖ ರಾಕ್ಷಸನ ಪೀಡೆ ತೊಲಗಿತು. ಗಂಗಣ್ಣನ ತಾಯಿ ಹುಡುಗನನ್ನು ಹರಸಿ, ಈವರೆಗೂ ಹೇಳದ ರಹಸ್ಯವನ್ನು ಹೇಳಿದಳು:—"ಕಂದಾ, ಈ ದುಷ್ಟನೇ ನಮ್ಮ ಪೂರ್ವಿಕರ ಐಶ್ವರ್ಯವನ್ನೆಲ್ಲಾ ಕೊಳ್ಳೆ ಹೊಡೆದು ನಮ್ಮನ್ನು ಬಿಕಾರಿಗಳನ್ನಾಗಿ ಮಾಡಿದ್ದು."

ನಂತರ ಗಂಗಣ್ಣ ಬಿದ್ದ ಗಿಡವನ್ನು ಎತ್ತಿ ಕಟ್ಟಿ ಮೇಲೇರಿ ಕೋಟೆಯಲ್ಲಿರುವ ಅಪ್ಸರಸಿಯನ್ನು ಮಾತಾಡಿಸಿದ. ಅವಳು ಅವನನ್ನು ಮೆಚ್ಚಿಕೊಳ್ಳುತ್ತ ತಾನೊಬ್ಬಳು ರಾಜಕುಮಾರಿಯೆಂದೂ, ತನ್ನನ್ನು ಈ ರಾಕ್ಷಸನು ಬಂಧಿಸಿದ್ದಾನೆಂದೂ ಹೇಳಿದಳು. ಅವಳ ಹೆಸರು ಸೌಗಂಧಿ. ಅವಳು ಸಂತೋಷದಿಂದ ಗಂಗಣ್ಣನನ್ನೇ ಮದುವೆಯಾದಳು. ಆ ಕೋಟೆ ಗಂಗಣ್ಣನ ವಶವಾಯಿತು. ಅವನು ಕೋಟೆಗೆ ಬೇರೆ ಮಾರ್ಗವನ್ನು ಏರ್ಪಡಿಸಿದ. ರಾಕ್ಷಸನ ಹೆಂಡತಿ ತಗ್ಗಿಹೋಗಿ ಗಂಗಣ್ಣನ ಸೇವಕಿಯಾದಳು. ಅಲ್ಲಿದ್ದವರೆಲ್ಲಾ ಗಂಗಣ್ಣನ ದಾಸರಾದರು.

ಬಂಗಾರದ ಕೋಳಿ, ಧನಸಂಚಿ, ಮಾಯಾ ವೀಣೆಗಳೊಂದಿಗೆ, ಗಂಗಣ್ಣ, ಸೌಗಂಧಿ, ಗಂಗಣ್ಣನ ತಾಯಿ ಬಹಳಕಾಲ ಸುಖವಾಗಿದ್ದರು.

# ಟೈ ಪು ಚಿ ತ್ರ




ಡಿ. ಎಲ್. ವೆಂಕಟಾಚಲಪತಿ - ಬೆಂಗಳೂರು

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ಫಿಬ್ರವರಿ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಡಿಸೆಂಬರ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.
ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು–26.

### ಜನವರಿ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಸಾಹಸಿಗರು

ಎರಡನೇ ಫೋಟೋ : ಸಹಾಯಕರು

ಕಳಿಸಿದವರು: ಕೆ. ದೇವರಾಜರಾವ್, ಚಿತ್ರದುರ್ಗ

ಜನವರಿ ಸಂಚಿಕೆಯಲ್ಲಿ ಈ ಮೇಲಿನ ಶೀರ್ಷಿಕೆಗಳು ಬರುತ್ತವೆ. ಸದರಿ ಬಹುಮಾನದ ಮೊಬಲಗು ರೂ. 10/– ನ್ನು ಜನವರಿ ಸಂಚಿಕೆ ಹೊರಟ ಕೂಡಲೇ ಕಳುಹಿಸಲ್ಪಡುತ್ತದೆ.

ವಿಜಯ ರವರ

# ಚಂದ್ರಹಾರಂ

ದಿಗ್ದರ್ಶಕರು..... ಕೆ.ಕಾಮೇಶ್ವರರಾವ್, ಬಿ.ಎ.

N44 ನಿರ್ಮಾಪಕರು.... ನಾಗಿರೆಡ್ಡಿ & ಚಕ್ರಪಾಣಿ



Printed by B. NAGI REDDI at the B. N. K. Press Ltd., Madras 26, and Published by hi
for Chandamama Publications, Madras 26. Controlling Editor: SRI 'CHAKRAPAN

Photo by R. M. Agashe



ಬಹುಮಾನ
ಪಡೆದ ಶೀರ್ಷಿಕೆ

ಅಡಗಲಿಕ್ಕೆ

ಕಳಿಸಿದವರು:
ಎನ್. ಎಸ್. ಕೋಟಿ, ಕುಮಟಾ

